ಶಾರದೆಯ ಮುತ್ತಿನ ಸರ

(೬)

# ಕಥಾಪಂಚಕ

(ಬೇರೆ ಬೇರೆ ತರದ ಆಯ್ದು ಕಥೆಗಳ ಸಂಗ್ರಹವು)

ಸಂಪಾದಕ

**ಪಂಡಿತ ಭೀ. ಜೀ. ಹುಲಿಕವಿ, ಎಸ್. ಟೀ. ಸೀ.**

ಶಾರದಾಮಂದಿರ, ಧಾರವಾಡ





Printed by K. R Bhise at the K P. Works, Dharwar and Published by Pandit B. J. Hulikavi at the Sharada Mandira, Dharwar.

ಶಕ ೧೮೫೧

ಶುಕ್ಲ ಸಂವತ್ಸರ—ಪೌಷ್ಯ, ಮಾಘ ಮತ್ತು ಫಾಲ್ಗುನ

**ಬೆಲೆ ೧೦ ಆಣೆ.**

# ಅಲ್ಪ ಪರಿಚಯ

ಇದು ಬೇರೆ ಬೇರೆ ತರದ ಅಯ್ದು ಕಥೆಗಳ ಸಂಗ್ರಹವೆಂಬದು ಹೆಸರಿನ ಮೇಲಿಂದಲೇ ಸ್ಪಷ್ಟವಾಗುತ್ತಿದೆ.

**೧ ಸನ್ಯಾಸಿ:— ಲೇ: ಶ್ರೀ. ಬತೇರೀಶಕಿಂಕರ, ಪು. ೧–೧೬** ಇದು ಸೂರ್ಯಾದಿಯಾದ ಎಂಟು ಸ್ವಾಭಾವಿಕ ವಸ್ತುಗಳ ರೂಪಕವನ್ನು ಮಾಡಿ ಸಂಸಾರದೊಳಗಿನ ತರುಣರ ಮನಶ್ಚಾಂಚಲ್ಯವನ್ನೂ, ಭ್ರಮೆಯನ್ನೂ ದೂರ ಮಾಡುವ ಉದ್ದೇಶದಿಂದ ಬರೆದ ಸಾಮಾಜಿಕ ದೃಶ್ಯವು.

**೨ ಜ್ವಾಲಾಮುಖಿ:— ಲೇ: ಶ್ರೀ. ನಾಗೇಶ, ಪು. ೧೭–೪೮** ಇದು ಕೆಟ್ಟ ಅತ್ತೆಯ ದುರ್ಗುಣಗಳನ್ನೂ ಸುಶೀಲೆಯಾದ ಸೊಸೆಯ ಸದ್ಗುಣಗಳನ್ನೂ ವಿಶದೀಕರಿಸುವ ಸಮಾಜಚಿತ್ರವು.

**೩ ರಾಜಶೇಖರ:— ಲೇ: ಶ್ರೀ. ಗು. ಮು. ಪದಕಿ, ಪು. ೪೯-೬೩** ಇದು ಕನ್ನಡ ಕವಿಶೇಖರನಾದ 'ಷಡಕ್ಷರಿ'ಯ ಕಾವ್ಯದ ಒಂದು ಭಾಗದ ಆಧಾರದಿಂದ ಬರೆದ ಸತ್ಕಥೆಯು.

**೪ ಬಂಧವಿಮೋಚನೆ:— ಲೇ: ಶ್ರೀ. ರಾ. ವಿ. ರಾಜಪುರೋಹಿತ, ಪು. ೬೪–೭೬** ಇದು ಮಹಾಭಾರತದೊಳಗಿನ ಪ್ರಸಂಗಗಳನ್ನು ಐತಿಹಾಸಿಕ ದೃಷ್ಟಿಯಿಂದ ಬರೆದ ಕಥೆಯು.

**೫ ಆರ್ಯರಿಗೂ ಕನ್ನಡಿಗರಿಗೂ ಒಪ್ಪಂದ:— ಲೇ: ವೈ. ವಾ. ಕಾವ್ಯಾನಂದ, ಪು. ೭೭–೮೨** ಇದು ವೈ. ವಾ. ಕಾವ್ಯಾನಂದರು ಜೀವಿಸಿದ್ದಾಗ ಮಮತೆಯಿಂದ ಶಾರದೆಗೆ ಅರ್ಪಿಸಿದ ಕಥಾಕುಸುಮವು.

ಹೆಚ್ಚಿನ ವಿವೇಚನೆಯನ್ನು ನಿರ್ಮತ್ಸರಿಗಳೂ ವಿದ್ವಾಂಸರೂ ಆದ ನಮ್ಮ ಪ್ರಿಯವಾಚಕ ಬಂಧುಭಗಿನಿಯರೇ ಮಾಡಲಿ.

ಮೇಲಿನ ಕಥೆಗಳನ್ನು ಬರೆದುಕೊಟ್ಟ ಶಾರದೆಯ ಹಿತಚಿಂತಕರಾದ ಲೇಖಕ ಮಹಾಶಯರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸುವೆವು.

—ಸಂಪಾದಕ

# ಕಥಾಪಂಚಕ

## ೧

## ಸನ್ಯಾಸಿ

## ೧ನೆಯ ಪ್ರವೇಶ

---

### ಸ್ಥಳ—ಶಯ್ಯಾಮಂದಿರ

**ಅಂಶುಮಾಲಿ—** (ತನ್ನಲ್ಲಿ ತಾನು) ಏನಿದು ಜಗತ್ತಿನ ವ್ಯವಹಾರವು? ಈ ಒಬ್ಬರನ್ನೊಬ್ಬರು ಮೋಸಿಸುವದು, ಸುಳ್ಳುಹೇಳುವದು, ಹೊಡೆದಾಡುವದು ರಾಮ! ರಾಮ! ಏನಿದು ನೀಚಬುದ್ಧಿ ? ಏನಿದು ಸ್ವಾರ್ಥಸಾಧನೆ ? ಜಗತ್ತಿನಲ್ಲಿ ಯಾವದಾದರೊಂದು ಒಳ್ಳೆಯ ಪದಾರ್ಥವಿದ್ದರಂತೂ, ಏನುಹೇಳಲಿ ಮನುಷ್ಯ ಪ್ರಾಣಿಯ ಸ್ಥಿತಿಯನ್ನು ? ಈಶ್ವರನು ಮನುಷ್ಯನಿಗೆ ಬುದ್ಧಿಯನ್ನು ಕೊಟ್ಟು ಸರ್ವಪ್ರಾಣಿಗಳ ರಾಜನನ್ನಾಗಿ ಮಾಡಿದನು. ಆದರೆ ಅವನು ಆ ಬುದ್ಧಿಯ ದುರುಪಯೋಗವನ್ನು ಮಾಡಿಕೊಳ್ಳುವನಲ್ಲ ! ಅಹಹ ! ಈ ಸಂಪತ್ತು ಏತರ ಸಲುವಾಗಿ? ಬಡವರನ್ನು ಕಾಡುವದರ ಸಲುವಾಗಿ ! ಸುಂದರ ಸ್ತ್ರೀಯು ಏತರ ಸಲುವಾಗಿ ? ಮಿತ್ರಾಮಿತ್ರರಲ್ಲಿ, ಅಣ್ಣತಮ್ಮಂದಿರಲ್ಲಿ, ಬಂಧು ಬಳಗ ಹಿರಿಕಿರಿಯ ರಲ್ಲಿ ಕಲಹವನ್ನು ಹುಟ್ಟಿಸುವದರ ಸಲುವಾಗಿ ! ಗೆಳೆಯರು ಏತರ ಸಲುವಾಗಿ ? ಪ್ರಸಂಗದಲ್ಲಿ ಚೆನ್ನಾಗಿ ಕೈ ತೋರಿಸುವದರ ಸಲುವಾಗಿ ! ಹಿರಿಯಣ್ಣನು ಏತರ ಸಲುವಾಗಿ ? ದೊಡ್ಡವನಾದ ಕೂಡಲೇ, ತಾಯಿ ತಂದೆ ಚಿಕ್ಕತಮ್ಮ ತಂಗಿಯ ರನ್ನು ಹೊರಗೆ ದೂಡುವದರ ಸಲುವಾಗಿ ! ಎಂದ ಮೇಲೆ ಇಂಥ ಸಂಸಾರಸಾಗರ ದಲ್ಲಿ ಏಕೆ ಬೀಳಬೇಕು? ಇಲ್ಲ; ಎಂದೂ ಬೀಳುವದಿಲ್ಲ. ನಾನು ಈ ದುಃಖಮಯ ವಾದ ಸಂಸಾರವನ್ನು ತ್ಯಾಗಮಾಡುವೆನು. ಎಲ್ಲಾದರೂ ಒಂದು ಅರಣ್ಯದಲ್ಲಿ ಹೋಗಿ ವಾಸಿಸುವೆನು. ಎಲ್ಲಿ ಸುಂದರವಾದ ಗಿಡಗಳ ಗುಂಪುಗಳಿರುವವೋ, ಎಲ್ಲಿ ಆ ಗಿಡಗಳು ಸುಂದರವಾದ ಹೂವುಗಳಿಂದ ಒಪ್ಪುತ್ತಿರುವವೋ, ಎಲ್ಲಿ ಸ್ವಚ್ಛವಾದ ನೀರು ಜುಳು ಜುಳು ಹರಿಯುವವೋ, ಎಲ್ಲಿ ಪಕ್ಷಿಗಳು ಆನಂದದಿಂದ ಕಿಲಿಕಿಲಾಟ ಮಾಡುತ್ತಿರುವವೋ, ಅಂತಹ ಸ್ಥಳಕ್ಕೆ ನಾನು ಹೋಗುವೆನು.

( ಪ್ರಭೆಯು ಹೂವಿನ ಹಾರವನ್ನು ಕಟ್ಟುತ್ತ ಪ್ರವೇಶಿಸುತ್ತಾಳೆ )

**ಪ್ರಭೆ**— ( ಹತ್ತರ ಬಂದು ) ನೋಡಿದಿರೇನು ? ನಮ್ಮ ಗುಲಾಬೀಗಿಡಕ್ಕೆ ಎಂಥ ಮನೋಹರವಾದ ಹೂವುಗಳು ಆಗಿರುವವೆಂಬುದನ್ನು ? ( ಅಂಶುಮಾಲಿಯ ಮುಖವನ್ನು ದಿಟ್ಟಿಸಿ ನೋಡಿ) ಅವ್ವಯ್ಯಾ! ಇವರ ಮುಖವು ಇಷ್ಟೇಕೆ ಬಾಡಿರುವದು!

**ಅಂಶುಮಾಲಿ**— ( ನಿರಾಶೆಯಿಂದ ) ಪ್ರಭೇ, ಜಗತ್ತಿನಲ್ಲಿ ನಡೆದಿರುವದನ್ನು ನೋಡಿ, ನನಗೆ ಅದರ ವಿಷಯುಕ್ಕೆ ವಿಲಕ್ಷಣವಾದ ತಾತ್ಸಾರವುಂಟಾಗಿದೆ.

( ಇಬ್ಬರೂ ಮಂಚದ ಮೇಲೆ ಕುಳಿತುಕೊಳ್ಳುತ್ತಾರೆ )

**ಪ್ರಭೆ**— (ವಿನೋದದಿಂದ) ಜಗತ್ತಿನ ವಿಷಯಕ್ಕೆ ನಿಮ್ಮ ಮನದಲ್ಲಿ ತಾತ್ಸಾರ ಹುಟ್ಟಲು ಕಾರಣವೇನು ?

**ಅಂಶುಮಾಲಿ**-- ( ಹುಬ್ಬುಗಂಟಿಕ್ಕಿ ) ನಿನಗೆ ಅವರಲ್ಲಿ ಒಳ್ಳೆಯದೇನು ತೋರುತ್ತದೆ ?

**ಪ್ರಭೆ**— ಏಕಿಲ್ಲ ? ಎಲ್ಲವೂ ನೆಟ್ಟಗಿದೆ. ಈ ಗುಲಾಬಿಯ ಹೂವನ್ನು ನೋಡಿರಿ. ( ಹೂವನ್ನು ಮುಂದಕ್ಕೆ ಚಾಚಿ ) ಎಷ್ಟು ಸುಂದರವಾಗಿದೆ ! ವಾಸನೆಯು ಎಷ್ಟು ಮಧುರವಾಗಿದೆ !

**ಅಂಶುಮಾಲಿ**— ಆ ಗುಲಾಬಿಯು ಹೂವು ಮಾತ್ರ ಸೊಂಪು ಕಂಪಾಗಿದೆ. ಆದರೆ ಕೆಳಗೆ ಮುಳ್ಳುಗಳಿವೆ. ಸಂಸಾರವೂ ಇದರಂತೆ. ನನಗೆ ಎಲ್ಲೆಲ್ಲಿಯೂ ಇದರ ಅನುಭವ ಬಂದಿದೆ. ಆದದರಿಂದಲೇ ನನಗೆ ಈ ಸಂಸಾರವು ಬೇಡವಾಗಿದೆಯೆಂದು ನಾನನ್ನುವದು ? ಅಂತೇ ನಾನು ಈ ಸಂಸಾರವನ್ನು ಬಿಟ್ಟು ತೆರಳುವೆನು.

**ಪ್ರಭೆ**— ( ಆಶ್ಚರ್ಯದಿಂದ ) ಅಂದರೇನು ?

**ಅಂಶುಮಾಲಿ**— ಅಂದರೇನೆಂದರೆ ನಾನು ಈ ಸಂಸಾರವನ್ನು ತ್ಯಾಗ ಮಾಡುವೆನು.

**ಪ್ರಭೆ**— ( ಪ್ರೇಮದಿಂದ ಗಂಡನ ಕೈಹಿಡಿದು ) ನಾನೇನು ನಿಮಗೆ ಹೇಳಲಿಕ್ಕೆ ಬೇಡ. ಆದರೆ ಇಂಥ ಕ್ಷುದ್ರವಿಚಾರವನ್ನು ಮನದಲ್ಲಿ ತರಬೇಡಿರಿ. ಜಗತ್ತು ನಿಮ್ಮ ತಿಳಿವಳಿಕೆಯಂತೆ ಇಲ್ಲ. ಏನೋ ಒಂದು ಕುಕಲ್ಪನೆ ಮಾಡಿದ್ದರಿಂದಲೇ ನಿಮಗೆ ಹಾಗೆನಿಸಿದೆ.

**ಅಂಶುಮಾಲಿ**— (ಸಿಟ್ಟಿನಿಂದ) ಹೀಗೇನು ? ಹೀಗೇನು? ನಾನು ಹೇಳುವದೆಲ್ಲ ಸುಳ್ಳೇ ಏನು ಹಾಗಾದರೆ ? ನನ್ನ ವಿಚಾರದ ದಿಕ್ಕು ತಪ್ಪಿದೆಯೋ ? ಎಲ್ಲವರಲ್ಲಿಯೂ ನೀನು ಸಹ ನನಗೆ ಬುದ್ಧಿಯು ಹೇಳಲು ಹತ್ತಿದೆಯಾ ?

**ಪ್ರಭೆ**— (ನಮ್ರತೆಯಿಂದ) ತಾವು ಹಾಗೆಂದಿಗೂ ತಿಳಿಯಬೇಡಿರಿ. ತಮಗೆ ಬುದ್ಧಿಯ ಹೇಳುವ ಯೋಗ್ಯತೆಯು ನನ್ನದಲ್ಲ ! ನಾನು ತಮ್ಮ ಪಾದಸೇವಕಳು. ಆದರೂ ನನ್ನ ಕರ್ತವ್ಯವನ್ನು ಮಾಡಬೇಕಲ್ಲವೇ? ತಾವು ನಿರಾಶರಾಗದಂತೆ ತಮ್ಮ ಮನವನ್ನು ತಿರುಗಿಸುವದು ನನ್ನ ಕೆಲಸವಲ್ಲವೇ ?

**ಅಂಶುಮಾಲಿ**— ಇಷ್ಟು ನಿನಗೆ ತಿಳಿಯುವದಲ್ಲವೇ? ಹಾಗಾದರೆ ನನಗೆ ಸನ್ಯಾಸವನ್ನು ಸ್ವೀಕಾರ ಮಾಡಲು ಅಪ್ಪಣೆ ಕೊಡು.

**ಪ್ರಭೆ**— (ಗಾಬರಿಯಾಗಿ) ಇದೇನು ನೆಟ್ಟಗೆ ! ಇದೇನು ಚಂದ !

**ಅಂಶುಮಾಲಿ**— ಈ ಸಂಸಾರದ ವಿಷಯಕ್ಕೆ ನನ್ನ ಮನಸ್ಸು ಕಲುಷಿತವಾಗಿದೆ. ಆದದರಿಂದ ಇದನ್ನು ತ್ಯಾಗಮಾಡುವೆನು.

**ಪ್ರಭೆ**— ( ನಿರಾಶೆಯಿಂದ ) ಆದರೆ ಅದಕ್ಕೆ ನನ್ನ ಅಪ್ಪಣೆ ಏತಕ್ಕೆ ?

**ಅಂಶುಮಾಲಿ**— ಸಂಸಾರದಲ್ಲಿ ಗಂಡನಿಗೆ ಹೆಂಡತಿಯು ಒಂದು ಬಂಧನವಿದ್ದಹಾಗೆ. ಆ ಬಂಧನದಿಂದ ಬಿಡುಗಡೆ ಹೊಂದಬೇಕೆಂದು ನನ್ನ ಇಚ್ಛೆ. ಆದದರಿಂದಲೇ ನನಗೆ ನೀನು ಅಪ್ಪಣೆಕೊಡು.

**ಪ್ರಭೆ** – ( ನಿರ್ಧಾರದಿಂದ ) ಅಂದಮೇಲೆ ನಾನು ಈ ಜಗತ್ತಿನಲ್ಲಿ ಏತಕ್ಕಿರಬೇಕು? ನನ್ನನ್ನೂ ಸಂಗಡ ಕರೆದುಕೊಂಡು ಹೋಗಿರಿ.

**ಅಂಶುಮಾಲಿ**—ಏಕೆ? ಹೀಗೇಕೆ ? ನಿನಗೆ ಸಂಸಾರವು ಆನಂದಮಯವಾಗಿ ಕಾಣುವದಲ್ಲವೇ ? ಆದದರಿಂದ ನೀನು ಇಲ್ಲಿಯೇ ಇರು. ನನ್ನ ಸಂಗಡ ಬರಬೇಡ.

**ಪ್ರಭೆ**—ನನ್ನ ಜೀವನದ ಸರ್ವಸ್ವವು ತಾವು. ತಾವು ಹೊರಟು ಹೋದ ಮೇಲೆ ಈ ಜಗತ್ತು ಸ್ಮಶಾನವಂತೆ. ಅಂದಮೇಲೆ ನಾನು ಇಲ್ಲಿದ್ದು ಏನು ಮಾಡುವದು ? ಆದದರಿಂದ ನಾವಿಬ್ಬರೂ ಕೂಡಿಯೇ ಹೋಗುವ.

**ಅಂಶುಮಾಲಿ**— ನೀನು ಅಲ್ಲಿ ಬಂದು ಏನುಮಾಡುವೆ ?

**ಪ್ರಭೆ** — ನೀವಾದರೂ ಅಲ್ಲಿ ಹೋಗಿ ಏನುಮಾಡುವಿರಿ ?

**ಅಂಶುಮಾಲಿ**— ನಾನು ಈಶಸೇವೆಯಲ್ಲಿ ಕಾಲಕಳೆಯುವೆನು.

**ಪ್ರಭೆ**— ಹಾಗಾದರೆ ನನ್ನ ದೇವರ ಸೇವೆಯನ್ನು ನಾನು ಯಾಕೆ ಮಾಡಬಾರದು ?

**ಅಂಶುಮಾಲಿ**—ಬೇಡಾರೆಂದರು ? ನಾನು ಹೋದ ಮೇಲೆ ಏನು ಬೇಕಾದದ್ದನ್ನು ಮಾಡು.

**ಪ್ರಭೆ—** ನನ್ನ ದೇವರು ನನ್ನನ್ನು ಬಿಟ್ಟು ತೊಲಗುವರೋ ? ಆದರೂ ಅವರ ಬೆನ್ನು ಹತ್ತಿಯೇ ನಾನು ಹೋಗುವೆನು. ಎಲ್ಲಿಯಾದರೂ ನನ್ನ ದೇವರ ಸೇವೆ ಮಾಡುವದೇ ನನ್ನ ಆದ್ಯಕರ್ತವ್ಯ. ಇದಕ್ಕೂ ನನಗೆ ಹೆಚ್ಚಿನದೇನೂ ಬೇಡ.

**ಅಂಶುಮಾಲಿ—** (ತನ್ನಲ್ಲಿ ತಾನು) ಇಂಥ ಪತ್ನಿಯನ್ನು ತೊಲಗಿ ಹೋಗುವದು ಒಳಿತೋ ಅಥವಾ ಕೆಡಕೋ ? ಆದರೆ ಬೇಡ. ಈ ಮೋಹವು ತರವಲ್ಲ. ಈ ಸಂಸಾರವನ್ನು ಬಿಡಬೇಕಾದರೆ ಎಲ್ಲವನ್ನೂ ಬಿಡಬೇಕು. ಯಾವದರ ವ್ಯಾಪ್ತಿಯೂ ನೆಟ್ಟಗಲ್ಲ. ( ಪ್ರಕಾಶವಾಗಿ ) ನೀನು ಏನುಮಾಡಿದರೂ ನಾನು ಇಲ್ಲಿ ಇರುವದಿಲ್ಲ. ನಿನ್ನನ್ನು ಸಂಗಡಲೂ ಕರೆದುಕೊಂಡು ಹೋಗುವದಿಲ್ಲ. ಈಗ ನೀನು ನಿಜವಾಗಿ ನಿನ್ನ ದೇವರ ಮೇಲೆ ಪ್ರೇಮಮಾಡುತ್ತಿದ್ದರೆ, ನಿನ್ನ ದೇವರ ಆಜ್ಞೆಯನ್ನು ಪಾಲಿಸುವದು ನಿನ್ನ ಕರ್ತವ್ಯವಾಗಿದೆ. ಆದದರಿಂದ ನೀನು ನನ್ನ ಸಂಗಡ ಬರಲು ಹಟ ಮಾಡಬೇಡ.

**ಪ್ರಭೆ—** ( ಮನಸ್ಸಿಲ್ಲದೆ ) ತಮ್ಮ ಇಚ್ಛೆಯಂತಾಗಲಿ. [ **ಹೋಗುತ್ತಾಳೆ** ]

---

## ೨ನೆಯ ಪ್ರವೇಶ

---

### ಸ್ಥಳ—ಅಂಶುಮಾಲಿಯ ಮನೆ

**ಅರುಣ—** ( ತನ್ನಲ್ಲಿ ತಾನು ) ಈ ನನ್ನ ಮಿತ್ರನು ಒಮ್ಮಿಂದೊಮ್ಮೆ ಮನೆ ಬಿಟ್ಟು ಹೋದನಲ್ಲ ! ಈ ಹುಚ್ಚು ಪೀರನಿಗೆ ಏನನ್ನಬೇಕು ? ಈ ಮೂರ್ಖತನಕ್ಕೆ ಏನನ್ನಬೇಕು ? ಅವನಿಗೆ ಐಶ್ವರ್ಯವು ಕಡಿಮೆಯಾಗಿತ್ತೇ ; ಇಲ್ಲ. ಹೆಂಡತಿಯು ಚಲುವೆಯೂ ಸದ್ಗುಣಿಯೂ ಇರುವಳು. ಹೀಗಿದ್ದಮೇಲೆ ಅವನ ತಲೆಯಲ್ಲಿ ಈ ಹುಚ್ಚು ಎಲ್ಲಿಂದ ಸೇರಿತು ! ಅಥವಾ ಯಾರಾದರೂ ದುಷ್ಟರು ಅವನ ಕಿವಿಯನ್ನೂದಿದರೋ ? ಮಾಟಮಾಡಿದರೋ ? ಯಾವದೂ ತಿಳಿಯದಾಗಿದೆ ! ಈಗ ಅವನನ್ನು ಹುಡಕಲು ಹೋಗುವದಾದರೂ ಎಲ್ಲಿ ?

( ಚೀರಿಸುತ್ತ ಪ್ರಭೆಯು ಬರುತ್ತಾಳೆ )

**ಪ್ರಭೆ—** ಅಣ್ಣನವರೇ, ನೋಡಿದಿರಾ ? ಆ ಹೊತ್ತಿನ ದಿನವೇ ನಾನು ನಿಮಗೆ ಇತ್ತ ಲಕ್ಷ್ಯಗೊಡಲು ಹೇಳಿದ್ದಿಲ್ಲವೇ ? ಆದರೆ ನೀವು ಈ ಮಾತು ನಗೆಚಾಟಿಗೆ ಎಂದು ತಿಳಿದಿರಿ. ಆದದರಿಂದಲೇ ಈ ದಿನ ಇಂಥ ಪ್ರಸಂಗವು ಬಂದಿತು.

**ಅರುಣ—** ಅತ್ತಿಗೇ ! ನಿಜವಾಗಿ ಹೇಳಬೇಕೆಂದರೆ ಆ ದಿವಸ ನನಗೆ ಅದು ಚೇಷ್ಟೆಯಾಗಿಯೇ ಕಂಡಿತು. ಅಂಶುಮಾಲಿಗೆ ಈ ಸಂಸಾರವು ಬೇಡಾಗಲು

ಏನಾದರೂ ಕಾರಣವಿದೆಯೋ ? ಅವರಿಗೆ ಈ ಬುದ್ಧಿಯು ಹೇಗುಂಟಾಯಿತು ? ಇರಲಿ. ಹೀಗಾಗುವದೆಂದು ನಾನು ಭಾವಿಸಿದ್ದಿಲ್ಲ. ಆದರೂ ನೀವೇನೂ ಚಿಂತೆ ಮಾಡಬೇಡಿರಿ. ನಾನು ಅವರ ಶೋಧವನ್ನು ಮಾಡುತ್ತೇನೆ. ಆ ದಿವಸ ನಿಮ್ಮಿಬ್ಬರಲ್ಲಿ ಏನಾದರೂ ಜಗಳದ ಮಾತುಗಳು ನಡೆದವೋ ಹೇಗೆ ? ಹೇಳಿರಿ.

**ಪ್ರಭೆ**— ( ಲಜ್ಜೆಯಿಂದ ) ಏನೂ ಇಲ್ಲ !

**ಅರುಣ**— ನೀವು ಮತ್ತೇನನ್ನೂ ತಿಳಿದುಕೊಳ್ಳಬೇಡಿರಿ. ನಾನು ಸುಮ್ಮನೆ ವಿಚಾರಿಸಿದೆನು. ಆ ಹೊತ್ತು ಅವರು ಯಾರ ಸಂಗಡಲಾದರೂ ವಾದವಿವಾದ ಮಾಡಿದ್ದರೋ ? ಅದು ನಿಮಗೆ ಗೊತ್ತುಂಟೋ ?

**ಪ್ರಭೆ**— ಇಕೋ ಕೇಳಿರಿ; ಅಣ್ಣನವರೇ, ಅವರಲ್ಲಿ ವೈರಾಗ್ಯವು ಹುಟ್ಟಿದೆಯೆಂಬುದು ನನಗೆ ಮೊದಲಿನಿಂದಲೂ ಗೊತ್ತಿಲ್ಲ. ಯಾರಾದರೂ ತಕ್ಕಿಸಿ ಅವರನ್ನು ಈ ಕೆಲಸಕ್ಕೆ ಪ್ರವೃತ್ತರನ್ನಾಗಿ ಮಾಡಿರಲಿಕ್ಕೆ ಬೇಕು. ಇತ್ತೀಚೆಯು ಅವರ ಸ್ವಭಾವವು ನಿಮಗೆ ಗೊತ್ತುಂಟು. ಏನಾದರೂ ಒಂದು ತಲೆಯಲ್ಲಿ ಸೇರಿತೆಂದರೆ, ಅದನು ಮಾಡಲೇ ಬೇಕು. ಅದು ಒಳ್ಳೆಯದೇ ಆಗಲಿ, ಅಥವಾ ಕೆಟ್ಟದೇ ಆಗಲಿ ! ಇತ್ತೀಚಿಗೆ ಅವರ ಮನಸ್ಸೇ ಆ ತರದ್ದಾಗಿತ್ತು. ಹಿಂದೆ ಒಂದು ದಿವಸ ಊರಲ್ಲಿ ಒಬ್ಬ ಸನ್ಯಾಸಿಯು ಬಂದಿರುವನೆಂದು ಕೇಳಿದರು. ಅವರ ದರ್ಶನಕ್ಕೆಂದು ಜನರು ಹೋಗಿ ಬರುತ್ತಿದ್ದರು. ಇವರೂ ದಿನಾಲು ಅವರ ದರ್ಶನಕ್ಕೆ ಹೋಗುತ್ತಿದ್ದರು. ಅಂದಿನಿಂದ ಅವರಿಗೆ ಸನ್ಯಾಸಿಯಾಗುವ ಹುಚ್ಚು ತಲೆಯಲ್ಲಿ ಸೇರಿತು. ಅವರಿಗೆ ಯಾರು ಹೇಳಬೇಕು ? ಏನಾದರೂ ಇರಲಿ. ಅವರ ಶೋಧವನ್ನು ಮೊದಲು ಮಾಡಬೇಕಾಗಿದೆ. ಆ ಕಾರ್ಯದಲ್ಲಿ ತಾವು ನನಗೆ ಸ್ವಲ್ಪ ಸಾಹಾಯ್ಯಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು.

**ಅರುಣ** — ಅತ್ತಿಗೇ, ನೀವು ಸುಮ್ಮನೆ ಇರಬೇಕು. ನಾನು ಎಲ್ಲ ವ್ಯವಸ್ಥೆಯನ್ನು ಮಾಡುವೆನು.

**ಪ್ರಭೆ** — ನಾನು ಹೇಗೆ ಸುಮ್ಮನೆ ಇರಲಿ ? ನೀವು ಹೋದ ಮೇಲಂತೂ ನನ್ನ ಮನಸ್ಸು ಮತ್ತಿಷ್ಟು ಗಾಬರಿಗೊಳ್ಳುವುದು. ಮುಂದೇನು ಮಾಡಬೇಕೆಂಬುದನ್ನು ಇಬ್ಬರೂ ವಿಚಾರಮಾಡಿ ಮಾಡುವ.

**ಅರುಣ** — ಹಾಗೆಯೇ ಆಗಲಿ. ಅದನ್ನು ವಿಚಾರಪೂರ್ವಕವಾಗಿಯೇ ಮಾಡತಕ್ಕದ್ದು. ನಾನು ಹೇಗೆ ಅವರ ಶೋಧಮಾಡುವೆನೆಂಬುದನ್ನು ನಾಳಿನ ದಿವಸ ಹೇಳುವೆನು. [ಹೋಗುತ್ತಾನೆ]

---

## ೩ನೆಯ ಪ್ರವೇಶ

---

### ಸ್ಥಳ—ಲತಾಮಂಡಪ

**ನಿಶಾದೇವಿ**— ಏಕೆ? ತಮುಸಾ, ಹೇಗೆ ಮೂಗನ್ನು ಚುಚ್ಚಿದೆನು ಆ ಹೊಯ್ಮಾಲೆಯುದು! ಹು! ಹು! ಪತಿಭಕ್ತಿಯೇ ನಿಜವಾದ ಭಕ್ತಿ! ಪತಿಯೇ ದೇವರು ಎನ್ನುತ್ತಿದ್ದಳಲ್ಲವೇ ಆ ಪ್ರಭೆಯು? ಈಗ ಮಾಡನ್ನು ಪತಿಭಕ್ತಿಯನ್ನು! ಮಾಡನ್ನು ಪತಿಪೂಜೆಯನ್ನು!

**ತಮುಸಾದೇವಿ** — ಭಪ್ಪರೆ, ನಿಶೇ, ನೀನು ಧನ್ಯಳು!

**ನಿಶಾದೇವಿ**— ಧನ್ಯಳೆಂದರೆ? ನನ್ನ ಹೆಸರು ನಿಶೆಯಲ್ಲವೇ? ನಿಶೆಯ ರಾಜ್ಯವು ಆರಂಭವಾದ ಕೂಡಲೇ, ಅನೇಕಪ್ರಕಾರದ ಕೃಷ್ಣಕೃತ್ಯಗಳು ನಡೆಯುವವು ತಿಳಿಯಿತೇ? ಪ್ರಭೆಯಂಥ ಹುಡುಗೆಯನ್ನು ಮೋಸಗೊಳಿಸುವದಕ್ಕೆ ನನ್ನಂಥವಳಿಗೆ ಎಷ್ಟು ಹೊತ್ತೇ? (ನಗುತ್ತ) ಈಗ ಪತಿಭಕ್ತಳಾದ ಪ್ರಭೆಯು ಏನು ಮಾಡುವಳೆಂಬುದನ್ನು ನೋಡುವ ನಡೆ!

**ತಮುಸಾದೇವಿ**— ಹಾಗೆಂದಿಗೂ ಅನ್ನಬೇಡ ಕಂಡಿಯಾ? ಏನೆಂದರೂ ಅವಳು ಪ್ರಭೆ ಇರುವಳು ಪ್ರಭೆ! ನಮ್ಮಂಥವರ ಮೂಗು ಚುಚ್ಚಲು ಅವಳಿಗೆ ತಡ ಹಿಡಿಯುವದಿಲ್ಲ!

**ನಿಶಾದೇವಿ**— ಏನು? ನನ್ನ ಮೂಗು ಚುಚ್ಚುವಳೇ? ಹೋಗೇ ಹೋಗು!

**ತಮುಸಾದೇವಿ**— ಅದೇತಕ್ಕೆ ಬೇಕು? ಈಗ ಅವಳೆದುರಿಗೆ ನಾವು ನಿಜವಾಗಿ ಮುಖವನ್ನು ಎತ್ತಕೂಡದು! ಅವಳು ನಿಜವಾಗಿ ಪತಿವ್ರತೆಯು! ಅವಳನ್ನು ನೀನು ಹೇಗೆ ಸರಿಗಟ್ಟುವೆ?

**ನಿಶಾದೇವಿ**— ಹೀಗೆ ತಿಳಿಯುವೆಯೇನು? ನನ್ನನ್ನು ಸಿಟ್ಟಿಗೆಬ್ಬಿಸಬೇಕೆಂದು ನೀನು ಹೀಗೆ ಮಾತನಾಡುವೆ! ನೀನು ಒಂದು ವೇಳೆ ನನಗೆ ಸಹಾಯವಾದರೆ ಆಕೆಯ ಮೋರೆಗೆ ಕಪ್ಪು ಹಚ್ಚುವೆನು ಕಪ್ಪು!

**ತಮುಸಾದೇವಿ**— ಅದು ಹೇಗೆ?

**ನಿಶಾದೇವಿ**— ಅದರಲ್ಲೇನಿದೆ? ನಿಶಾದೇವಿಗೆ ತಮುಸಾದೇವಿಯ ಸಾಹಾಯ್ಯವಿತ್ತೆಂದರೆ ಪಾಪಕರ್ಮಗಳು ಸಹಜವಾಗಿ ಜರುಗುವವು. ನೀನು ನನಗೆ ಸಾಹಾಯ್ಯಮಾಡಿದರೆ ಪತಿವ್ರತೆಯು ಸೋಗುಮಾಡುವ ಈ ಪ್ರಭೆಯನ್ನು ನಾಶಮಾಡಲು ನಮಗೆ ವೇಳೆಯು ಬಹಳ ಹತ್ತಲಾರದು!

**ತಮಸಾದೇವಿ**—ದೇವೀ, ನೀನು ನನ್ನ ಸಾಹಾಯ್ಯವನ್ನು ತೆಗೆದುಕೊಂಡು ಏನು ಮಾಡುವೆ ?

**ನಿಶಾದೇವಿ**— ಯಾವ ರೀತಿಯಿಂದ ಅವಳ ಗಂಡನನ್ನು ಇಲ್ಲವಂತೆ ಮಾಡಿದೆನೋ, ಅದೇ ರೀತಿಯಿಂದ ಅವಳ ಮುಖ್ಯಸಂಪತ್ತಾದ ಪಾತಿವ್ರತ್ಯವನ್ನು ಭಂಗಮಾಡಲು ಮೇಘಾಡಂಬರನನ್ನು ಸಿದ್ಧಗೊಳಿಸುವೆನು.

**ತಮಸಾದೇವಿ**— ಹಾ! ಹಾ! ಅವನು ನಿನ್ನ ಕೊರಳೊಳಗಿನ ತಾಯಿತ ವಿದ್ದಂತೆ. ನಿಶಾದೇವೀ, ಆ ಹುಡುಗೆಯ ಮೇಲೆ ನಿನ್ನ ಕಟಾಕ್ಷವು ಇಷ್ಟೇಕೆ ?

**ನಿಶಾದೇವಿ**— ತನ್ನ ಪತಿಭಕ್ತಿಯು ಹೇಗಾದರೂ ಇರಲಿ! ಅವಳ ಡೌಲೇನು ? ಜಂಬವೆಷ್ಟು? ನಮ್ಮನ್ನು ಕಂಡರಂತೂ ಆಯಿತು. ದೂರೇ ಹಾಯ್ದು ಹೋಗುವಳು. ಮಾತಾಡಿಸುವದಂತೂ ಒತ್ತಟ್ಟಿಗಿರಲಿ. ನಾವು ಹಾದರಗಿತ್ತೆಯ ರಂತೆ! ತಾನು ಪತಿವ್ರತೆಯಂತೆ! ನಾವು ಗಂಡರಾಮಿಯರಂತೆ! ತಾನು ಕೋಮ ಲಾಂಗಿಯಂತೆ! ಹೀಗಾಗಿ ನಾವು ಜನರಲ್ಲಿ ಮುಖವನ್ನೇ ಎತ್ತದಂತಾಗಿದೆ!

**ತಮಸಾದೇವಿ**— ಹೌದು ನೋಡೇ! ನಿನ್ನಂತೆ ನನಗೂ ಅವಳನ್ನು ಕಂಡರೆ ಭಯವೆನಿಸುತ್ತದೆ!

**ನಿಶಾದೇವಿ**— ಆದದರಿಂದಲೇ ಅವಳನ್ನು ನಾಶಮಾಡಿದ ಹೊರತು ನಮ್ಮ ರಾಜ್ಯವು ನಿಷ್ಕಂಟಕವಾಗಲಾರದು. ಪ್ರಭೆಯು ನಾಶವಾಯಿತೆಂದರೆ, ತಮಸಾ, ನಮ್ಮದೇ ಅಲ್ಲವೇ ರಾಜ್ಯವು ? ಅವಳನ್ನು ನಮ್ಮೊಳಗೆ ಸೇರ್ಪಡೆಯಾಗುವಂತೆ ಮಾಡಬೇಕು ಒಂದು; ಇಲ್ಲದಿದ್ದರೆ ಅವಳನ್ನು ನಾಶಮಾಡಬೇಕು ಒಂದು.

**ತಮಸಾದೇವಿ**— ಹಾಗಾದರೆ ಈಗ ಏನು ಯೋಚಿಸಿರುವೆ ?

**ನಿಶಾದೇವಿ**— ಅದು ನನಗೆ ಬಗೆಹರಿಯದಾಗಿದೆ. ಪ್ರಭೆಯ ಗಂಡ ನನ್ನು ಮನೆಬಿಡಿಸಿ ಹೊರಗೆ ಹೊರಡಿಸುವ ಕೆಲಸವು ಹಗುರಿನದಾಗಿತ್ತು. ಆದರೆ ಇವಳನ್ನು ನಮ್ಮ ಜಾಲದಲ್ಲಿ ಹಿಡಿಯುವ ಕೆಲಸವು ತುಂಬ ಬಿಕ್ಕಟ್ಟಿನದಾಗಿದೆ.

**ತಮಸಾದೇವಿ**— ಆಶ್ಚರ್ಯ ! ಅತ್ಯಾಶ್ಚರ್ಯ !! ಅಂಶುಮಾಲಿಯು ಒಮ್ಮಿಂದೊಮ್ಮೆ ತನ್ನ ಇನಿಯಳನ್ನು ತೊಲಗಿ ಹೋದದ್ದು ಅತ್ಯಂತಾಶ್ಚರ್ಯ !!

**ನಿಶಾದೇವಿ**— ನಿಜಸಂಗತಿಯನ್ನು ಹೇಳಲಾ ? ಅಂಶುಮಾಲಿಗೆ ಸುಳ್ಳು ಎಂದೂ ಸೇರುವದಿಲ್ಲ. ನನ್ನ ನಿನ್ನಂಥ ಜನರ ಕೆಟ್ಟ ಕೃತ್ಯಗಳನ್ನು ಕಂಡು ಅವನಿಗೆ ಅಸಹ್ಯವೆನಿಸುತ್ತಿತ್ತು. ಇದೇ ಸಂಧಿಯಲ್ಲಿ ಮೇಘಾಡಂಬರನು ಸಾಧುವೇಷದಿಂದ ಸನ್ಯಾಸಧರ್ಮವೇ ಶ್ರೇಷ್ಠಧರ್ಮವೆಂದು ಅವನಿಗೆ ಉಪದೇಶಿಸಿದನು. ಅದೇ ಅವನ ತಲೆಯಲ್ಲಿ ಹುಚ್ಚು ಸೇರಿತು. ಕೂಡಲೇ ಅವನು ಮನೆಬಿಟ್ಟು ಹೊರಟನು.

**ತಮುಸಾದೇವಿ**— ಮುಂದೆ ಅವನು ಎಲ್ಲಿ ಹೋದನು ?

**ನಿಶಾದೇವಿ** — ಅದು ನನಗೆ ಗೊತ್ತಿಲ್ಲ! ಆದರೆ ಅವನು ಬಹುತರವಾಗಿ ಸಹ್ಯಾದ್ರಿಯ ಯಾವದಾದರೊಂದು ಗವಿಯಲ್ಲಿರಬಹುದು ! ಎಲ್ಲಿರುವನೆಂಬದನ್ನು ತೆಗೆದುಕೊಂಡಾದರೂ ಮಾಡುವದೇನು ? ಪ್ರಭೆಯನ್ನು ನಾಶಗೊಳಿಸುವದೊಂದೇ ಈಗ ನಮ್ಮ ಕರ್ತವ್ಯ !

**ತಮುಸಾದೇವಿ**— ಹಾಗಾದರೆ ನಿನ್ನ ವಿಚಾರವೇನು ?

**ನಿಶಾದೇವಿ**— ನಿನ್ನ ಮತ್ತು ಮೇಘಾಡಂಬರನ ಸಾಹಾಯ್ಯದಿಂದ ಆ ಕೆಲಸ ಮಾಡುವದೊಂದೇ ವಿಚಾರ !

**ತಮುಸಾದೇವಿ**— ಹಾಗಾದರೆ ಚೆನ್ನಾಗಿ ಚಿತ್ತದಲ್ಲಿಡು. ಆ ಮೇಘಾಡಂಬರನ ಪತ್ನಿಯಾದ ಚಪಲೆಯು ಆ ಪ್ರಭೆಯ ಜೀವದ ಗೆಳತಿಯಿರುವಳು. ಅವಳಿಗೆ ನಾವು ಮಾಡಿರುವ ಕಟ್ಟು ಏನಾದರೂ ಗೊತ್ತಾದರೆ ಅನರ್ಥವುಂಟಾದೀತು. ಜೋಕೆ.

**ನಿಶಾದೇವಿ** — ಇರಲಿ. ಅದನ್ನು ನೋಡಲು ಬಂದೀತು ಹಿಂದುಗಡೆ.

( ಇಬ್ಬರೂ ಹೋಗುತ್ತಾರೆ. ಇಷ್ಟರಲ್ಲಿ ಚಂದ್ರಿಕೆಯು ಬರುತ್ತಾಳೆ )

**ಚಂದ್ರಿಕೆ**— ಎಲೈ ಕುಟಿಲನೀತಿಯುವರೇ, ನೀಚಕಾರ್ಯವನ್ನು ಯಥಾಸಾಂಗವಾಗಿ ನಡೆಸಲು ಇಷ್ಟು ನಿಮ್ಮ ದುರಾಲೋಚನೆಯೇ ? ಪ್ರಭೆಯು ನಿಮ್ಮ ಕೆಲಸದಲ್ಲಿ ಅಡ್ಡ ಬರುವಳಲ್ಲವೇ ? ಅವಳಿಗೆ ಆಗುವ ಮಾನಸನ್ಮಾನಗಳನ್ನು ಕಂಡು ನಿಮಗೆ ಸಹಿಸಲು ಆಗುವದಿಲ್ಲವಲ್ಲವೇ ? ಆದವರಿಂದಲೇ ಅವಳನ್ನು ನಾಶ ಮಾಡಲು ಪ್ರಯತ್ನಮಾಡುವಿರಾ ? ಆದರೆ ಚೆನ್ನಾಗಿ ಲಕ್ಷ್ಯದಲ್ಲಿಡಿರಿ. ಪ್ರಭೆಯೇ ನಿಮ್ಮ ಮೂಗನ್ನು ಚುಚ್ಚುವಳು ಹಿಂದುಗಡೆಗೆ ! ( ಅತ್ತಲಿತ್ತ ನೋಡುತ್ತಾಳೆ ) ಅವರಾರು ಅಲ್ಲಿ ಬರುವವರು ? ಹಾ ! ಆರಾಕ್ಷಸ ಮೇಘಾಡಂಬರನು ! ಹೋಗುವ. ಇಲ್ಲಿ ನಿಲ್ಲುವದು ತರವಲ್ಲ ! ( ಹೋಗುತ್ತಾಳೆ )

( ಮೇಘಾಡಂಬರನು ಬರುತ್ತಾನೆ )

**ಮೇಘಾಡಂಬರ** — ಹಾ ! ಹಾ ಹಾ ! ಈ ನಿಶೆಯು ಹೇಳಿಕೆಯಂತೆ ಅಂಶುಮಾಲಿಯನ್ನು ಓಡಿಸಿದೆನು ಊರುಬಿಡಿಸಿ ! ಈಗ ಅವನ ಅತ್ಯಂತಲಾವಣ್ಯವತಿ ಪತ್ನಿಯಾದ ಪ್ರಭೆಯು ಒಂದು ವೇಳೆ ನನಗೆ ಲಭಿಸಿದಳೆಂದರೆ ( ಅವಸರದಿಂದ ಅತ್ತಲಿತ್ತ ನೋಡುತ್ತ ) ಹೇಗಾಗುವದು ಆ ಮೇಲೆ ? ನನ್ನ ರಾಣಿಯಾದ ಚಪಲೆಯು ಬಹಳೇ ಚಂಚಲೆ. ಚಂಚಲೆಯಾದರೂ ಆಗಲಿ; ಅವಳ ಅಧಿಕಾರವೆಷ್ಟು ನನ್ನ ಮೇಲೆ? ಇರಲಿ. ಅವಳಿಗೆ ಸ್ವಲ್ಪ ಭೆಟ್ಟಿಯಾಗುವ. [ ಹೋಗುತ್ತಾನೆ ]

## ೪ನೆಯ ಪ್ರವೇಶ



### ಸ್ಥಳ—ಅರಣ್ಯ

(ಸಾಧುವಿನ ವೇಷದಲ್ಲಿದ್ದ ಪ್ರಭೆಯು ಬರುತ್ತಾಳೆ)

**ಪ್ರಭೆ**—ಒಟ್ಟಾರೆ ನನ್ನ ಸೌಭಾಗ್ಯವನ್ನು ಕೆಡಿಸಲು ಈ ಮೂವರೂ ಕೂಡಿ ಹೊಂಚುಹಾಕಿದಂತೆ ಕಾಣುತ್ತದೆ. ಒಳ್ಳೆಯದು. ಚಂದ್ರಿಕೆಯು ನನಗೆ ಸೂಚನೆ ಕೊಟ್ಟದ್ದು ನೆಟ್ಟಗಾಯಿತು. ಮೋಘಾಡಂಬರನು ನನ್ನನ್ನು ಘಾತಿಸಲಿಕ್ಕಿಲ್ಲೇ ? ಆಗಲಿ. ಶ್ರೀರಾಮನು ಏನು ಮಾಡಿಸುವನೋ ಅದೇ ಸತ್ಯ! (ಅತ್ತಇತ್ತ ನೋಡುತ್ತ) ನಿಜವಾಗಿಯೂ ಈ ಅರಣ್ಯವು ಎಷ್ಟು ರಮಣೀಯವಾಗಿದೆಯಲ್ಲ! ಅವರು ಯಾವಾಗಲೂ ಇಂಥ ಅರಣ್ಯದಲ್ಲಿ ಬರಬೇಕೆಂದೇ ಇಚ್ಛಿಸುತ್ತಿದ್ದರು. ಅರುಣಣ್ಣನು ಅತ್ತ ನೋಡಿಕೊಂಡು ಬರುವೆನೆಂದೂ, ಅಲ್ಲಿಯ ವರೆಗೆ ನೀನು ಇಲ್ಲಿಯೇ ಇರಬೇಕೆಂದೂ ನನಗೆ ಹೇಳಿರುವನು. ಆತನು ಬರುವ ವರೆಗೆ ನಾನು ಇಲ್ಲಿಯಾದರೂ ಅವರ ಶೋಧನಮಾಡುವೆನು. (ತಿರುಗಾಡಹತ್ತುತ್ತಾಳೆ.)

(ಮೋಘಾಡಂಬರನು ಬರುತ್ತಾನೆ)

**ಮೋಘಾಡಂಬರ**—(ಉಬ್ಬಸಬಡುತ್ತ) ಹಾ! ಇನ್ನೂ ಇದೇ ಅವಳು ಇಲ್ಲಿಯೇ ಇದ್ದಳಲ್ಲವೇ ? ಸ್ವಭಾವಸುಂದರರು ಎಂತಹ ಅವಸ್ಥೆಯಲ್ಲಿದ್ದರೂ ಚೆನ್ನಾಗಿ ಶೋಭಿಸುತ್ತಾರೆಂಬ ಮಾತು ಸುಳ್ಳಲ್ಲ! ಸಾಧುವಿನ ವೇಷವಲ್ಲಿದ್ದರೂ ಅವಳ ಮುಖಮುದ್ರೆಯು ಎಷ್ಟು ಮೋಹಕವಾಗಿದೆಯಲ್ಲ! ಅಹಾ! ಇಷ್ಟರಲ್ಲಿ ಅವಳು ಎಲ್ಲಿ ಮಾಯವಾದಳು. ಗಿಡಗಳ ಗುಂಪಿನಲ್ಲಿ ಎಲ್ಲಿಯಾದರೂ ಅಡಗಿಕೊಂಡಿರುವಳೋ? ಇಲ್ಲ! ಅಲ್ಲಿಯೂ ಇಲ್ಲ! ಆ ಪ್ರಭೆಯು ಪಾತಿವ್ರತ್ಯವನ್ನು ಭಂಗಪಡಿಸಬೇಕೆಂದು, ಆ ನಿಶಾದೇವಿಯು ಹಟ ಹಿಡಿದಿರುವಳು. ಮಾಡುವದಾದರೂ ಏನು? ನಮ್ಮಂಥ ಪುರುಷರಿಗೆ ಮನೆಯಲ್ಲಿ ಧರ್ಮಪತ್ನಿಯ ಒಳ್ಳೆಯ ಮಾತುಗಳನ್ನು ಕೇಳಬೇಕೆಂದರೆ ಜೀವದ ಮೇಲೆ ಬರುತ್ತದೆ. ಇಷ್ಟೇ ಅಲ್ಲ; ಅವರ ಮೇಲೆಯೇ ನಾವು ಗುರುಗುಟ್ಟುತ್ತೇವೆ. ಆದರೆ ನಿಶೆಯಂಥ ಲಲನೆಯ ನೀಚತಮವಾದ ಮಾತನ್ನು ಕೇಳಲು ಮನಕ್ಕೆ ಒಂದು ಬಗೆಯ ಉಲ್ಲಾಸವಾಗುತ್ತದೆ. ಹೀಗೇಕೆ ಆಗುತ್ತದೆಂಬುದನ್ನು ಮಾತ್ರ ಹೇಳಲಿಕ್ಕೆ ಬರುವಂತಿಲ್ಲ. ಅಲಲ, ಮಾತನಾಡುವ ಗುಂಗಿನಲ್ಲಿ ಪ್ರಭೆಯನ್ನು ಹಿಂಬಾಲಿಸುವವನ್ನೇ ಮರೆತು ಬಿಟ್ಟೆನಲ್ಲ? (ದೂರ ನೋಡುತ್ತ) ಹಾ! ದಿನ್ನೆಯ ಮೇಲೆ ಇರುವಳು. ಇನ್ನು ಬೇಗನೆ ನಡೆದು ಅವಳ ಬೆನ್ನು ಹತ್ತುವ.

( ಅವಸರದಿಂದ ಅವಳ ಹತ್ತರ ಹೋಗುತ್ತಾನೆ. ಪ್ರಭೆಯು ಗಾಬರಿಯಾಗಿ ಓಡಿಹೋಗಲು ಯತ್ನಿಸುತ್ತಾಳೆ. )

**ಮೋಘಾಡಂಬರ**—ಪ್ರಭೇ, ಈ ವೇಷದಲ್ಲಿಯೂ ನಾನು ನಿನ್ನನ್ನು ಗುರುತಿಸಿದೆನು. ಆದರೆ, ಹೇಳು ಇಂಥ ಭೀಕರವಾದ, ನಿರ್ಜನವಾದ ಮತ್ತು ಕ್ರೂರ ಪಶುಗಳಿಂದ ತುಂಬಿದ ಅರಣ್ಯದಲ್ಲಿ ಏಕಾಕಿನಿಯಾಗಿ ಹೀಗೇಕೆ ತಿರುಗಾಡುವೆ ?

**ಪ್ರಭೆ**— ( ಕ್ರೋಧದಿಂದ ) ಅದೇತಕ್ಕೆ ನಿಮಗೆ ವಿಚಾರ ?

**ಮೋಘಾಡಂಬರ**—ವಾಹವ್ವಾ ! ಮೊಟ್ಟಮೊದಲನೆಯ ಭೆಟ್ಟಿಗೆ ನೀನು ಪ್ರಣಯಕೋಪವನ್ನು ಪ್ರಾರಂಭಿಸಿದೆಯಲ್ಲ ! ವಾಹವ್ವಾ! ಇದರಿಂದ ನಿನ್ನ ಸುಂದರವಾದ ಗಲ್ಲಗಳ ಮೇಲೆ ಎಂಥ ಗುಲಾಬಿ ವರ್ಣವು ಬಂದಿರುವದು ? ಹಾ! ಹಾ! ಎಂಥ ಸ್ವಾದ ! ಎಂಥ ಮಧುರ !

**ಪ್ರಭೆ**—( ತಿರಸ್ಕಾರದಿಂದ ) ಪರಸ್ತ್ರೀಯರಿಗೆ ಹೀಗೆ ಅನ್ನಲು ನಾಚಿಕೆಯಾದರೂ ಬರುವದಿಲ್ಲವೇ ?

**ಮೋಘಾಡಂಬರ**—ಪರಮೇಶ್ವರನು, ನಾಚಿಕೆಯ ದೊಡ್ಡ ಭಾಗವನ್ನು ಹೆಂಗಸರಿಗೆ ಕೊಟ್ಟಿದ್ದರಿಂದ, ಪುರುಷರ ಭಾಗಕ್ಕೆ ಸ್ವಲ್ಪ ಬಂದಿತು. ಆದದರಿಂದ ನಮ್ಮಂಥ ವೀರರೂ ನಿನ್ನಂಥ ಲಾವಣ್ಯದಿಂದ ತುಂಬಿದ ತರುಣಿಯ ಗಲ್ಲದ ಮೇಲಿನ ಬಣ್ಣದ ವರ್ಣನೆ ಮಾಡುವದರಲ್ಲಿ ಸ್ವಲ್ಪ ಗುಂಗಾಗುತ್ತಾರೆ. ( ಪ್ರಭೆಯು ಹೋಗ ಯತ್ನಿಸುತ್ತಾಳೆ. ಮೋಘಾಡಂಬರನು ಅವಳನ್ನು ತಡೆಯುತ್ತಾನೆ. )

**ಪ್ರಭೆ** — ( ಸಂತಾಪದಿಂದ ಕಾಲು ಅಪ್ಪಳಿಸುತ್ತ ) ಮೋಘಾಡಂಬರಾ, ಹಾದಿಯು ಬಿಟ್ಟು ನಡೆದೆ.

**ಮೋಘಾಡಂಬರ**—ಇಲ್ಲ ! ಹಾದಿಯ ಮೇಲೆಯೇ ಇದ್ದೇನೆ. ಆದರೆ ನೀನು ನನ್ನ ಜೀವವನ್ನೇ ತೆಗೆದುಕೊಂಡು ಹೋಗುವೆಯಲ್ಲ ?

**ಪ್ರಭೆ**—( ತನ್ನಲ್ಲಿ ತಾನು ) ನಾನು ಒಂಟಿಗಳಿಗಿ ಇರುವದನ್ನು ಕಂಡು ಇವನು ಹೀಗೆ ಬಡಬಡಿಸಹತ್ತಿದ್ದಾನೆ. ಅರುಣಣ್ಣನು ಇಷ್ಟರಲ್ಲಿ ಇತ್ತ ಬರುವನೋ, ಇಲ್ಲೋ, ಎಂದು ಸಂಶಯ ಬರುತ್ತದೆ. ಹಾಗಾದರೆ ಈಗೇನು ಮಾಡುವದು ? ಈಗ ಇವನ ಕೂಡ ಸ್ವಲ್ಪ ಸೌಮ್ಯತೆಯಿಂದ ನಡೆದರಾಯಿತು. ( ಪ್ರಕಾಶವಾಗಿ ) ಮೋಘಾಡಂಬರಾ, ಪರಸ್ತ್ರೀಯರ ಮೇಲೆ ಕಣ್ಣಿಡುವದು ಎಂದೂ ತರವಲ್ಲ ! ರಾವಣನ ಅವಸ್ಥೆ ಏನಾಯಿತೆಂಬುದನ್ನು ಜ್ಞಾಪಕದಲ್ಲಿ ತಂದುಕೋ !

**ಮೋಘಾಡಂಬರ**—ನಾನು ನಿನ್ನನ್ನು ಪರಸ್ತ್ರೀ ಎಂದು ತಿಳಿದಿದ್ದಲ್ಲಿ ಹಾಗಾದೀತು ? ಇಷ್ಟಾಗಿ ಎಲ್ಲರಿಗೂ ಹೀಗಾಗುವದೆಂದು ತಿಳಿಯಬೇಡ. ಇಂದ್ರನು ಅಹಲ್ಯೆಯ ಮೇಲಿನ ಕಾಮವಾಸನೆಯನ್ನು ತೀರಿಸಿಕೊಂಡನಲ್ಲವೇ ?

**ಪ್ರಭೆ**—ಅವನ ಸರ್ವಾಂಗವಲ್ಲಿ ಛಿದ್ರಗಳು ಏಕಾದವು? ಮತ್ತು ಅವನು ಅಹಲ್ಯೆಯನ್ನು ಕಪಟವೇಷದಿಂದ ಮೋಸಗೊಳಿಸಿದನು. ಹಾಗೆ ನಾನು ಮೋಸ ಹೋಗತಕ್ಕವಳಲ್ಲ. ತಿಳಿಯಿತೇ?

**ಮೋಘಾಡಂಬರ**—(ನಗುತ್ತ) ಈ ಅರಣ್ಯದಲ್ಲಿ ನಿನ್ನ ರಕ್ಷಣೆಯನ್ನು ಯಾರು ಮಾಡುವರು?

**ಪ್ರಭೆ**—(ನಿಶ್ಚಯದಿಂದ) ನಾನು ಪವಿತ್ರಳಾಗಿದ್ದರೆ ಇಲ್ಲಿದ್ದ ಈ ಗಿಡಗಳೇ ನನಗೆ ಸಾಹಾಯ್ಯ ಮಾಡುವವು!

**ಮೋಘಾಡಂಬರ**—(ಪ್ರಭೆಯ ಮೇಲೆ ಜೋಲು ಹೊಡೆದು) ನೋಡು ಹಾಗಾದರೆ! ಪ್ರಭೆಯನ್ನು ಬಿಡಿಸುವದಕ್ಕೆ ಗಿಡಗಳು ಮುಂದೆ ಬರುವವೋ? ಅಥವಾ ಪ್ರಭೆಯು ಮೋಘಾಡಂಬರನ ಸಖಿಯಾಗಿ ಮುಂದೆ ಬರುವಳೋ?

(ಪ್ರಭೆಯು ಗಡಬಡಿಸುತ್ತಾಳೆ. ಇಷ್ಟರಲ್ಲಿ ಝುಂಝಾವಾತನು ಬರುತ್ತಾನೆ.)

**ಝುಂಝಾವಾತ**—(ಗರ್ಜನೆ ಮಾಡಿ) ಯಾರವನು? ದುಷ್ಟಾ, ಪಾಪಾತ್ಮಾ, ಬಿಡು. ಏಕಾಂಗಿಯಾಗಿರುವ ಆ ಅಬಲೆಯ ಮೇಲೆ ಅತ್ಯಾಚಾರ ಮಾಡುವೆಯಾ? ಈಗಿಂದೀಗಲೇ ಬಿಟ್ಟು ಬಿಡು ಆ ಸಾಧ್ವಿಯನ್ನು!

**ಮೋಘಾಡಂಬರ**—(ಗಾಬರಿಯಾಗಿ) ಅಯ್ಯೋ, ಈ ದೆವ್ವ ಎಲ್ಲಿಂದ ಬಂದಿತು? ಈಗ ಓಡಿಹೋಗುವದಾದರೂ ಹೇಗೆ? ಅವನ ಮುಂದೆ ನಾನು ಏನನ್ನೂ ಮಾಡಲಾರೆನು. ಮನೆಯಲ್ಲಿಯ ಧರ್ಮಪತ್ನಿಯ ಮಾತು ನನಗೆ ಸರಿಹೋಗಲಿಲ್ಲ; ಆ ದುಷ್ಟೆಯಾದ ನಿಶೆಯ ಮಾತು ಮಾತ್ರ ಸರಿಹೋಯಿತು. ಅನುಭವಿಸು, ಜೀವವೇ ಅನುಭವಿಸು. ದುಷ್ಟರ ಸಂಗತಿಯ ಪರಿಣಾಮವು ಕಟ್ಟಕಡೆಗೆ ಹೀಗೆಯೇ ಆಗತಕ್ಕದ್ದು. ಹೇಗಾದರೂ ಮಾಡಿ ಈಗ ಓಡಿಹೋಗಬೇಕು ಈ ದುರಾತ್ಮನ ಬಲೆಯಿಂದ ತಪ್ಪಿಸಿಕೊಂಡು! (ತಪ್ಪಿಸಿ ಓಡಿ ಹೋಗುತ್ತಾನೆ)

**ಪ್ರಭೆ** (ವಿನಯದಿಂದ ಕೈಜೋಡಿಸಿ) ಹೇ ಪುರುಷಶ್ರೇಷ್ಠಾ, ಈ ಹೊತ್ತು ತಾವು ನನ್ನ ಮೇಲೆ ಬಹಳೇ ಉಪಕಾರ ಮಾಡಿದಿರಿ. ಅದನ್ನು ಈ ಜನ್ಮದಲ್ಲೆಂದೂ ಮರೆಯೆನು. ತಮ್ಮ ಹೆಸರೇನು?

**ಝುಂಝಾವಾತ**—ಸಾಧ್ವೀಶಿರೋಮಣೀ, ಇದೆಂತಹ ಉಪಕಾರವು? ಅಬಲೆಯನ್ನು ದುಷ್ಟನಿಂದ ಸಂರಕ್ಷಣ ಮಾಡುವದು ಪ್ರತಿಯೊಬ್ಬ ಮನುಜನ ಆದ್ಯಕರ್ತವ್ಯವಾಗಿದೆ. ನನಗೆ ಝುಂಝಾವಾತನೆಂದು ಕರೆಯುವರು

**ಪ್ರಭೆ**—ತಮ್ಮ ವಾಸಸ್ಥಳವು ಇದೇ ಏನು?

**ಝುಂಝಾವಾತ**— ಒಂದೇ ಸ್ಥಳದಲ್ಲಿರುವದು ನನಗೆ ಮೊದಲಿನಿಂದಲೂ ನೆಟ್ಟಗೆನಿಸುವದಿಲ್ಲ. ನಾನು ಯಾವಾಗಲೂ ಪ್ರವಾಸ ಮಾಡುತ್ತಿರುವೆನು.

**ಪ್ರಭೆ**—ಹಾಗಾದರೆ ತಾವು ಎಷ್ಟೋ ದೇಶಗಳನ್ನು ನೋಡಿರಬಹುದು. ತಾವು ಯಾವ ಉದ್ಯೋಗವನ್ನು ಮಾಡುವಿರಿ ?

**ಝುಂಝಾವಾತ**—ನಾನು ಯಾವಾಗಲೂ ಒಂದೇ ಉದ್ಯೋಗವನ್ನು ಮಾಡುತ್ತೇನೆಂಬಂತೇನೂ ಇಲ್ಲ; ವಸಂತಋತುವಿನಲ್ಲಿ ಮಾತ್ರ ಸುಗಂಧದ್ರವ್ಯದ ವ್ಯಾಪಾರವನ್ನು ಮಾಡುವೆನು.

**ಪ್ರಭೆ**—ಹೀಗೇನು ? ಪ್ರವಾಸದಲ್ಲಿ ತಮಗೆ ಎಲ್ಲಿಯಾದರೂ ಒಬ್ಬ ತೇಜಸ್ವಿಯಾದ ತರುಣಗೃಹಸ್ಥರು ಭೆಟ್ಟಿಯಾದರೋ ?

**ಝುಂಝಾವಾತ**—ಇನ್ನೂ ಇದೇ ಈಗ ಆ ಗುಡ್ಡದ ಮೇಲಿಂದ ಬರುವಾಗ ಒಬ್ಬ ತೇಜಸ್ವಿಯಾದ ತರುಣನನ್ನು ನೋಡಿದೆನು ! ಪ್ರವಾಸದ ದಣಿಕೆಯಿಂದ ಅವನ ಮುಖಮುದ್ರೆಯು ಬಹಳೇ ಕೆಂಪಾಗಿತ್ತು. ಒಳ್ಳೆಯದು. ನನಗೆ ನಿಲ್ಲಲು ವೇಳೆ ಇಲ್ಲ. ನಾನು ಹೋಗುವೆನು.

**ಪ್ರಭೆ**—ದೇವರು ತಮಗೆ ಕಲ್ಯಾಣಮಾಡಲಿ. ನಮಸ್ಕರಿಸುವೆನು.

**ಝುಂಝಾವಾತ**—ದೇವರು ನಿನ್ನನ್ನು ಸುಖದಲ್ಲಿಡಲಿ. (**ಹೋಗುತ್ತಾನೆ**)

**ಪ್ರಭೆ**—ಇಷ್ಟು ದಿವಸಗಳ ವರೆಗೆ ಒಂದೇಸವನೆ ಕಷ್ಟಬಟ್ಟದ್ದರಿಂದ ಈ ಹೊತ್ತು ಅವರ ಶೋಧವಾಯಿತಲ್ಲವೇ ? ನಿಜವಾಗಿ ಅವರು ಅವರೇ ಆಗಿರಬಹುದು ! ಹಾಗಾದರೆ ಅತ್ತಕಡೆಗೆ ಹೋಗುವ. [ **ಹೋಗುತ್ತಾಳೆ.** ]

---

## ೫ನೆಯ ಪ್ರವೇಶ

---

### ಸ್ಥಳ—ಸರೋವರದ ದಂಡೆ

**ಅಂಶುಮಾಲಿ**— ( ತನ್ನಲ್ಲಿ ತಾನು ) ಗುರುವಿನ ಶೋಧಾರ್ಥವಾಗಿ ತಿರುಗಿ ತಿರುಗಿ ಸಾಕಾಯಿತಪ್ಪಾ ! ಇನ್ನೂ ವರೆಗೆ ಒಬ್ಬನೂ ಒಳ್ಳೆಯ ಗುರುವು ಭೆಟ್ಟಿಯಾಗಲಿಲ್ಲವಲ್ಲ ! ಈಗೇನು ಮಾಡಬೇಕು ? ಗುರುವು ಇಲ್ಲದೆ ಆತ್ಮೋನ್ನತಿಯಾಗುವದಿಲ್ಲ. ಇಷ್ಟು ಹೊತ್ತಿಗೆ ನನಗೆ ಗುರುವು ಸಿಕ್ಕಿದ್ದರೆ ಎಷ್ಟೋ ಆತ್ಮೋನ್ನತಿಯನ್ನು ಸಾಧಿಸಬಹುದಾಗಿತ್ತು. ಈ ಅರಣ್ಯವು ತಪಶ್ಚರ್ಯಮಾಡಲು ಎಷ್ಟು ಅನಕೂಲವಾಗಿದೆ ? ಅಹಹ ? ಎಲ್ಲ ಕಡೆಗೂ ಪವಿತ್ರತೆಯು ! ಎಲ್ಲ ಕಡೆಗೂ

ಆನಂದಮಯಸ್ಥಿತಿಯು! ದೇವಾ, ಈಗ ಗುರುವಿನ ಭೆಟ್ಟಿಯು ಹೇಗಾಗುವದು? ಗುರುದೇವಾ, ಕೃಪೆಮಾಡು. ಮತ್ತು ಈ ದೀನದಾಸನಿಗೆ ದರ್ಶನಲಾಭವನ್ನು ಕೊಡು. (ಅತ್ತಲಿತ್ತ ನೋಡುತ್ತಾನೆ) ಆ ಬಂಡೆಯ ಮೇಲೆ ಯಾರೋ ಕುಳಿತಿರುವರಲ್ಲ? ಯಾರೋ ಸಾಧುಪುರುಷರೆಂಬಂತೆ ಕಾಣುತ್ತದೆ. ಅವರಿಂದ ಕಾರ್ಯಭಾಗವನ್ನು ಕೈಗೂಡಿಸಿಕೊಳ್ಳುವ. (ಹತ್ತಿರ ಹೋಗಿ) ಹೋ, ಹೋ, ಇವರು ನಿಜವಾಗಿ ಸಾಧುಪುರುಷರು. ಏನು ಇವರ ತೇಜಸ್ಸು! ಧ್ಯಾನದಲ್ಲಿ ಮಗ್ನರಾದಂತೆ ತೋರುತ್ತದೆ! ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಂತೆ ಕಾಣುತ್ತದೆ! ಅಹಹಾ, ಏನು ಇವರ ಆನಂದಮಯವಾದ ಮುಖಮುದ್ರೆಯಿದು! ಇವರೇ, ಇವರೇ ಯೋಗ್ಯರು! ಇವರಿಂದಲೇ ಉಪದೇಶ ಹೊಂದತಕ್ಕದ್ದು. ಗುರುವರ್ಯ, ನಿಮಗೆ ನಮಸ್ಕಾರವಿರಲಿ. ದಾಸನ ಮೇಲೆ ಕೃಪೆಮಾಡಿರಿ. (ತನ್ನಲ್ಲಿ) ಇನ್ನೂ ಕೇಳಿಸಿದಂತೆ ತೋರುವದಿಲ್ಲ. (ಮತ್ತಿಷ್ಟು ಹತ್ತಿರ ಹೋಗಿ) ಗುರುದೇವಾ, ನಿಮ್ಮ ಪೂಜ್ಯಪಾದಾರವಿಂದಗಳಿಗೆ ನಮಸ್ಕಾರವು.

(ಗುರುದೇವನು ಕಣ್ಣುಗಳನ್ನು ತೆರೆದು ನೋಡುತ್ತಾನೆ. ಅಂಶುಮಾಲಿಯು ನಮಸ್ಕರಿಸುತ್ತಾನೆ.)

**ಗುರುದೇವ**— ನೀವು ಯಾವ ಉದ್ದೇಶದಿಂದ ಬಂದಿರುವಿರೋ, ಆ ಉದ್ದೇಶವು ಸಫಲವಾಗುವದಿಲ್ಲ. ನಾನು ನಿಮಗೆ ಉಪದೇಶ ಕೊಡುವದಿಲ್ಲ.

**ಅಂಶುಮಾಲಿ**—(ತನ್ನಲ್ಲಿ) ಅಬ್ಬಬ್ಬಾ! ನನ್ನ ಉದ್ದೇಶವನ್ನು ಇವರು ತಿಳಿದರು. ಆದರೆ ಇವರು ನನಗೆ ಉಪದೇಶ ಕೊಡುವದಿಲ್ಲವೆಂದೆನ್ನುವರು. ಹೀಗೇಕೆ? (ಪ್ರಕಾಶವಾಗಿ) ದಾಸನ ಮೇಲೆ ಇಷ್ಟು ಅವಕೃಪೆಯೇಕೆ?

**ಗುರುದೇವ**—ವಯಸ್ಸಿನ ಮಾನದಿಂದ ಪ್ರತಿಯೊಬ್ಬನು ತಮ್ಮ ತಮ್ಮ ಕೆಲಸಗಳನ್ನು ಮಾಡತಕ್ಕದ್ದು. ತಮ್ಮ ಇಂಥ ತರುಣಾವಸ್ಥೆಯಲ್ಲಿ ಇತ್ತಕಡೆಗೆ ಬರಲು ಇಚ್ಛೆಯಾದರೂ ಏಕಾಯಿತು?

**ಅಂಶುಮಾಲಿ**— ಗುರುವರ್ಯ, ಜಗತ್ತಿನಲ್ಲಿ ಮನಸ್ಸಿಗೆ ಸಮಾಧಾನವಾಗುವಂಥ ಒಂದಾದರೂ ಉದಾಹರಣೆಯನ್ನು ನಾನು ನೋಡಲಿಲ್ಲ.

**ಗುರುದೇವ**— ಜಗತ್ತಿನಲ್ಲಿ ನೀನು ಏಕೆ ಜನ್ಮ ತೊಟ್ಟಿರುವಿ?

**ಅಂಶುಮಾಲಿ**— (ಸಂಕಟದಿಂದ) ಅದು ನನಗೆ ಗೊತ್ತಿಲ್ಲ!

**ಗುರುದೇವ**— ಯಾವದೂ ತಿಳಿಯದೆ ಇತ್ತ ಬಂದಿರುವೆಯೆಂದ ಮೇಲೆ, ನೀನು ಚಂಚಲಮನಸ್ಸಿನವನಾಗಿರುವೆಯೆಂಬುದು ಸ್ಪಷ್ಟವಾಗಿ ಕಾಣಿಸುವದು. ಇಂಥ ಮನುಷ್ಯನ ಮನಸ್ಸು ಎಂದಾದರೂ ಪಾರಲೌಕಿಕಸಾಧನೆಗೆ ಸ್ಥಿರವಾದೀತೇ?

**ಅಂಶುಮಾಲಿ—** (ನಮ್ರತೆಯಿಂದ) ಹಾಗಾದರೆ ಈಗ ನಾನು ಏನು ಮಾಡಲಿ ?

**ಗುರುದೇವ—** ಅದನ್ನೇ ನಾನು ಹೇಳುವೆನು. ಆದರೆ ಮುಂದೆ ನಾನು ಹೇಳಿದಂತೆ ನಡೆಯಬೇಕು.

**ಅಂಶುಮಾಲಿ—** ಅಪರಾಧವನ್ನು ಕ್ಷಮಿಸಿರಿ. ನನ್ನ ಶಂಕೆಗಳ ಪರಿಹಾರವಾಗುವ ವರೆಗೆ ನಿಮ್ಮ ಆಜ್ಞೆಯನ್ನು ಪಾಲಿಸೆನು.

**ಗುರುದೇವ—** ಒಪ್ಪಿಗೆ. ನಿನ್ನ ಶಂಕೆಗಳಾದರೂ ಯಾವವಿರುವವು ? ಹೇಳು ?

**ಅಂಶುಮಾಲಿ—** ಈ ಸಂಸಾರದಲ್ಲಿ ಒಬ್ಬರಿಗೊಬ್ಬರು ಏಕೆ ಕೂಡಿ ನಡೆಯುವದಿಲ್ಲ ? ಗೆಳೆಯರು ಗೆಳೆಯರನ್ನು ಏಕೆ ಮೋಸಿಸುವರು; ಸ್ತ್ರೀಯರು ಜಗಳಗಳಿಗೆ ಕಾರಣೀಭೂತರೇಕೆ ? ಬಡವರನ್ನು ಕಂಡರೆ ಮದಾಂಧರಾದ ಶ್ರೀಮಂತರು ತಿರಸ್ಕರಿಸುವರೇಕೆ ? ಶ್ರೀಮಂತರು ಮಾಡುವ ಕೃಷ್ಣಕೃತ್ಯಗಳು ಹಾಗೆಯೇ ಸುಸೂತ್ರವಾಗಿ ನಡೆಯುವವೇಕೆ ?

**ಗುರುದೇವ—** ಕೇಳು. ಈ ಎಲ್ಲ ಅನರ್ಥಗಳಿಗೆ ಸಂಪತ್ತಿನ ಲೋಭವು ಮುಖ್ಯಕಾರಣವು. ಒಂದೇ ಮನಸ್ಸಿನಿಂದ ಈ ಸಂಪತ್ತಿನ ಲೋಭವನ್ನು ಹೊರದೂಡಲಿಕ್ಕೆ ಪ್ರತಿಯೊಬ್ಬ ಮನುಜನು ಸಿದ್ಧನಾಗತಕ್ಕದ್ದು. ಸಂಸಾರದಲ್ಲಿ ದುಃಖವೇ ಯಾವನಿಗೆ ಕಾಣುವದೋ, ಅವನು ಇನ್ನೂ ಸ್ವಾರ್ಥವನ್ನು ಬಿಟ್ಟಿಲ್ಲೆಂದು ತಿಳಿಯಬೇಕು. ಅಂಥವನಿಗೇ ಈ ಸಂಸಾರವು ಯಾವಾಗಲೂ ದುಃಖಮಯವಾಗಿ ತೋರುವದು.

**ಅಂಶುಮಾಲಿ—** ಈ ಸ್ವಾರ್ಥದಿಂದ ನೀಚಕಾರ್ಯಗಳು ಜರುಗುವವು. ಅವು ದೇವರಿಗೆ ಕಾಣಿಸುವದಿಲ್ಲವೇ ? ಅವನು ಅವುಗಳ ಪ್ರತಿಬಂಧವನ್ನು ಏಕೆ ಮಾಡಬಾರದು ? ದುಷ್ಟರಿಗೆ ಕೂಡಲೇ ಪ್ರಾಯಶ್ಚಿತ್ತವು ಏಕೆ ಸಿಗಬಾರದು ?

**ಗುರುದೇವ—** ದೇವರು ಸದಸದ್ವಿವೇಕವೆಂಬ ತಕ್ಕಡಿಯನ್ನು ಎಲ್ಲರಿಗೂ ಕೊಟ್ಟಿರುವನು. ಮನುಷ್ಯನು ತನ್ನ ಪ್ರತ್ಯೇಕ ಕೃತ್ಯವನ್ನು ಆ ತಕ್ಕಡಿಯಲ್ಲಿ ಹಾಕಿ ತೂಗಬೇಕು. ಯಾವದು ಕೆಟ್ಟದು, ಯಾವದು ಒಳ್ಳೆಯದು ಎಂಬದು ಅವನಿಗೆ ಸ್ಪಷ್ಟವಾಗಿ ಕಾಣುವದು. ಹೀಗಿದ್ದರೂ ಅವನು ಅದಕ್ಕೆ ಲಕ್ಷ್ಯಗೊಡುವದಿಲ್ಲ ! ಇದಕ್ಕೆ ದೇವರೇನು ಮಾಡಬೇಕು ?

**ಅಂಶುಮಾಲಿ—** ಹಾಗಾದರೆ ಜಗತ್ತಿನ ಉದ್ಧಾರವು ಹೇಗಾಗುವದು ?

**ಗುರುದೇವ**— ಇದೇ ಪ್ರಶ್ನವನ್ನು ತಿರುಗಿ ನಿನ್ನನ್ನೇ ಕೇಳುವೆನು! ಹೇಳು. ಯಾವನ ಮನಸ್ಸಿನಲ್ಲಿ ನೀಚಕೃತ್ಯಗಳ ವಿಷಯಕ್ಕೆ ತಿರಸ್ಕಾರಬುದ್ಧಿಯು ಇರುವದೋ, ಅವನು ಈಶ್ವರನ ಸೇವಕನು. ನೀನು ಈಶ್ವರನ ಸೇವಕನಿರುವೆ. ಪಾಪಭೀರುವಿರುವೆ. ಆದರೆ ಜಗತ್ತಿನಲ್ಲಿ ನಡೆದ ಅತ್ಯಾಚಾರಗಳನ್ನು ತಡೆಯಲು, ನೀನು ಅಸಮರ್ಥನಿರುವೆಯೆಂದು ನಿನಗೆ ಎನಿಸಿತು. ಆದದರಿಂದಲೇ ಸಂಸಾರವನ್ನು ಬಿಟ್ಟು ನೀನು ಬಂದಿರುವೆ. ಆದರೆ ಇದು ನಿನಗೆ ಯೋಗ್ಯವಲ್ಲ. ನಿನಗೆ ಸದಸದ್ವಿವೇಕಬುದ್ಧಿಯು ಇದ್ದರೂ ನೀನು ಅದರ ಉಪಯೋಗಮಾಡಿಕೊಳ್ಳಲಿಲ್ಲ. ಕುರುಡನಂತೆ ಆಚರಿಸಿದೆ. ಎಂದ ಮೇಲೆ ಜಗತ್ತಿನ ಉದ್ಧಾರವು ಹೇಗಾಗಬೇಕು?

**ಅಂಶುಮಾಲಿ**— ಹಾಗಾದರೆ ನಾನು ಮತ್ತೆ ತಿರುಗಿ ಹೋಗಬಹುದೋ? ಹೋಗಿ ಮುಂದೇನು ಮಾಡಲಿ ?

**ಗುರುದೇವ**— ನಿನ್ನ ಮನಸ್ಸಿಗೆ ಹೊಳೆದಂತೆ ಮಾಡು. ತೋಟವಲ್ಲಿ ಒಂದು ಗುಲಾಬೀಹೂವು ಅರಳಿದ ಕೂಡಲೇ ಸುತ್ತಲಿನ ವಾತಾವರಣವು ಸುಗಂಧಮಯವಾಗುತ್ತದೆ. ನೀನು ಎಲ್ಲಿದ್ದರೂ ಅಲ್ಲಿ ಆನಂದವೇ ಇದೆ. ಜಗತ್ತು ಎಲ್ಲೆಲ್ಲಿಯೂ ಆನಂದಮಯವಾಗಿದೆ. ಆನಂದದ ಶೋಧಾರ್ಥವಾಗಿ ಅಡವಡವಿ ತಿರುಗುವದು ತರವಲ್ಲ! ಮನಸ್ಸಿನ ಸ್ಥಿರತ್ವವೇ ಆನಂದ! ಮನಶ್ಚಾಂಚಲ್ಯವೇ ದುಃಖ! ನೀನು ಇಲ್ಲಿದ್ದರೇನು ? ಎಲ್ಲಿದ್ದರೇನು ? ಹೇಳು ! ಮತ್ತಾವ ಶಂಕೆಗಳಿವೆ?

**ಅಂಶುಮಾಲಿ**— (ತನ್ನಲ್ಲಿ ತಾನು) ನನ್ನ ಪ್ರಭಾಮಣಿಯು ಇದೇ ಅಮೃತವನ್ನೇ ಸ್ವಲ್ಪ ಪಾನಮಾಡಿಸಿದ್ದಳು. ಏನು? ಇವರ ಹೇಳಿಕೆಯಂತೆ ತಿರುಗಿ ಹೋಗಲಾ? ಪ್ರಭೆಯು ಏನಾದರೂ ಅಂದರೆ? (ಪ್ರಕಾಶವಾಗಿ) ಗುರುದೇವಾ! ಹಿಂದಕ್ಕೆ ತಮ್ಮಂತೆಯೇ ನನ್ನ ಇನಿಯಳು ನನಗೆ ಇದೇ ರೀತಿಯಾಗಿ ಹೇಳಿದ್ದಳು. ಆದರೆ ಅವಳ ವಿಚಾರವನ್ನು ಕೇಳದೇ, ಲೆಕ್ಕಿಸದೇ ಮನೆಬಿಟ್ಟು ಹೊರಟು ಬಂದೆನು. ನನ್ನ ಎಲ್ಲ ಸಂಶಯಗಳು ತಮ್ಮ ಉಪದೇಶದಿಂದ ನಷ್ಟವಾದವು. ನಾನು ತಿರುಗಿ ಹೋಗುವೆನು. ಆದರೆ ನನ್ನ ಇನಿಯಳು ಏನಾದರೂ ಅಂದಾಳೆಂದು ಸಂಕೋಚ ಬರುತ್ತದೆ. ಇಷ್ಟೇ ?

**ಗುರುದೇವ**— (ನಗುತ್ತ) ಅವಳು ನಿನ್ನನ್ನು ಕ್ಷಮಿಸುವಳು. (ಅತ್ತಕಡೆಗೆ ನೋಡಿ) ಅಕೋ ಅಲ್ಲಿ ನೋಡು, ಯಾರು ಬರುವವರೆಂಬುದನ್ನು ?

(ಅರುಣನು ಬರುತ್ತಾನೆ)

**ಅರುಣ**— (ತನ್ನಲ್ಲಿ) ಅತ್ತಿಗೆಯು ತನ್ನ ಪಣವನ್ನು ಗೆದ್ದಂತೆ ಕಾಣು

ತ್ತದೆ. (ಪ್ರಕಾಶವಾಗಿ) ಗುರುವರ್ಯ, ನಮಸ್ಕರಿಸುತ್ತೇನೆ.

**ಗುರುದೇವ**— ಸುಖದಿಂದ ಬಾಳು.

**ಅರುಣ**— ಮಿತ್ರಾ, ಅಂಶುಮಾಲೀ, ಇತ್ತ ಎತ್ತಕಡೆಗೆ? ಇಂಥ ವೇಷವೇಕೆ ?

**ಗುರುದೇವ**— ಅವರಿಗೆ ಅದನ್ನು ಕೇಳಬೇಡ.

**ಅರುಣ**— ಅಪ್ಪಣೆ.

**ಗುರುದೇವ**— (ಅಂಸುಮಾಲಿಗೆ) ನಿಮ್ಮ ಇನಿಯಳು ನಿಮಗೆ ಏನನ್ನೂ ಅನ್ನುವದಿಲ್ಲ. ಆದರೆ ನೀವು ಅವಳ ಒಂದು ಅಪರಾಧವನ್ನು ಕ್ಷಮಿಸತಕ್ಕದ್ದು.

**ಅಂಶುಮಾಲಿ**— (ಆಶ್ಚರ್ಯದಿಂದ) ಅದಾವ ಅಪರಾಧವು ?

**ಗುರುದೇವ**— ಅವಳು ಮತ್ತೆ ತಮಗೆ ಸಂಸಾರದಲ್ಲಿ ಆನಂದದಿಂದಿರಲಿಕ್ಕೆ ಹೇಳುವಳು.

(ಪ್ರಭಾದೇವಿಯು ಜಟೆ ಗಡ್ಡ...ಮೊದಲಾದವುಗಳನ್ನು ಬಿಚ್ಚಿ ಬಿಸುಡುತ್ತಾಳೆ. ಅಂಶುಮಾಲಿಯು ಅಚ್ಚರಿಗೊಳ್ಳುತ್ತಾನೆ. ಅರುಣನು ನಕ್ಕುನಲಿದಾಡಿ ಕುಣಿದಾಡುತ್ತಾನೆ.)

**ಪ್ರಭೆ**— ಪ್ರಾಣನಾಥ, ನನ್ನ ಅಪರಾಧಗಳನ್ನು ಕ್ಷಮಿಸಿರಿ.

**ಅಂಶುಮಾಲಿ**— (ಅವಳನ್ನು ಬಾಹುಪಾಶದಿಂದ ಬಿಗಿದಪ್ಪಿ) ನನ್ನ ಪ್ರಭೆಯೇ-- ನೀನು ಚತುರೆ. ನಿಜವಾಗಿ ನೀನು ಚತುರೆ. ನೀನು ಅಂದಂತೆಯೇ ಸಂಸಾರವಿರುವದು. ಹೇಳು ಈಗ ನಿನ್ನ ಇಚ್ಛೆ ಏನಿರುವದು ?

**ಪ್ರಭೆ**— ಪ್ರಪಂಚದಲ್ಲಿ ತರುಣರು ಸಾಂಸಾರಿಕವಾದ ತೊಂದರೆಗಳಿಗೆ ಗಾಬರಿಯಾಗಿ ಮನೆಮಾರುಗಳನ್ನು ಬಿಟ್ಟು ವನಕ್ಕೆ ಹೋಗುವ ಇಚ್ಛೆಯನ್ನು ಮಾಡಬಾರದೆಂದೂ, ಸಂಸಾರವು ಆನಂದಮಯವಾಗಿದೆಯೆಂದೂ ಎಲ್ಲ ಜನರಿಗೂ ತಿಳಿಯಪಡಿಸಲು ಯತ್ನಿಸಿರಿ.

**ಅಂಶುಮಾಲಿ**— ಹಾಗಾದರೆ, ಪ್ರಪಂಚದಲ್ಲಿಯ ತರುಣಗೃಹಿಣಿಯರೂ ಹಾದಿಯ ತಪ್ಪಿ ಹೋಗುವ ತಮ್ಮ ಪತಿಗಳನ್ನು ಮಧುರ ಸದುಪದೇಶಗಳಿಂದ ಹಾದಿಗೆ ತರುವಂತೆ ನೀನು ಪ್ರಯತ್ನಿಸು.

**ಅರುಣ**— ತಥಾಸ್ತು ! ತಥಾಸ್ತು !

---

೨

# ಜ್ವಾಲಾಮುಖಿ

## ಒಂದನೆಯ ಜ್ವಾಲೆ

ಚಂದ್ರಪುರದ ಮನೋಹರನು ಸಾಧಾರಣಪ್ರತಿಯ ಮನೆತನದವನು. ಆಗರ್ಭಶ್ರೀಮಂತರಂತೆ ಇವನಿಗೆ ಸುಖೋಪಭೋಗದ ಪ್ರತಿಯೊಂದು ಸಾಧನಗಳಿರದಿದ್ದರೂ ಅನ್ನ-ವಸ್ತ್ರಗಳಿಗೆ ತಾಪತ್ರಯವಿರಲಿಲ್ಲ. ಇವನಿಗೆ ದುರ್ಗಾಬಾಯಿಯೆಂಬ ತಾಯಿಯೂ, ಮನೋರಮೆಯೆಂಬ ಹೆಂಡತಿಯೂ ಇದ್ದರು. ವೆಚ್ಚವು ಹಿಡಿತದಲ್ಲಿದ್ದುದರಿಂದ ಇವನಿಗೆ ಬರುವ ಸಾವಿರಾರು ರೂಪಾಯಿಗಳ ಉತ್ಪನ್ನವು ಇವನ ಮನೆತನಕ್ಕೆ ಬೇಕಾದ ಹಾಗೆ ಸಾಲುತ್ತಿತ್ತು. ವಿಲಾಸಿಯಾದ ಅವನು ದ್ರವ್ಯಾರ್ಜನೆಯ ಕಡೆಗೆ ವಿಶೇಷವಾಗಿ ಲಕ್ಷ್ಯಗೊಡುತ್ತಿದ್ದಿಲ್ಲವಾದರೂ ದುಂದುಗಾರನಿದ್ದಿಲ್ಲ. ಇವನಿಗೀಗ ಇಪ್ಪತ್ತೈದನೆಯ ವರ್ಷವು ನಡೆಯುತ್ತಿದ್ದು ಸುರೂಪಿಯೂ, ಸದ್ಗುಣಿಯೂ, ಚತುರನೂ ಆಗಿದ್ದನು. ಇವನ ಪತ್ನಿಯಾದ ಮನೋರಮೆಯು ಎಲ್ಲ ರೀತಿಯಿಂದಲೂ ಪತಿಗೆ ತಕ್ಕವಳಾಗಿದ್ದಳು; ಅವಳಿಗೀಗ ಹದಿನಾರನೆಯ ವರ್ಷವು ನಡೆಯುತ್ತಿತ್ತು. ದುರ್ಗಾಬಾಯಿಯ ಪುಣ್ಯವು ಬಲವತ್ತರವಿದ್ದುದರಿಂದಲೇ ಮಗನಿಗೆ ಅನುರೂಪಳಾದ ಕನ್ಯೆಯು ದೊರೆತಿರುವಳೆಂದು ಅವಳ ಸುದೈವವನ್ನು ಜನರು ಬಹಳವಾಗಿ ಕೊಂಡಾಡುತ್ತಿದ್ದರು. ಹವಳ-ಮುತ್ತುಗಳಂತೆ ಕೂಡಿರುವ ಆ ನೂತನದಂಪತಿಗಳನ್ನು ನೋಡಿ ಹಿರಿಹಿರಿ ಹಿಗ್ಗದವರು ಚಂದ್ರಪುರದಲ್ಲಿದ್ದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು !

ದುರ್ಗಾಬಾಯಿಯು ಕರ್ಕಶಸ್ವಭಾವದವಳಿದ್ದಳು. ಸುಶೀಲರಾದ ಆ ದಂಪತಿಗಳನ್ನು ಕಂಡರೆ ಇವಳಿಗೆ ಸೇರಿಕೆಯಿದ್ದಿಲ್ಲ. ನೆರೆಹೊರೆಯವರು ಇವಳ ವರ್ತನವನ್ನು ಪೂರ್ಣವಾಗಿ ಅಲ್ಲಗಳೆಯುತ್ತಿದ್ದರು. ಬಂಗಾರದಂಥ ಸೊಸೆಯನ್ನೂ, ಮಗನನ್ನೂ ನೋಡಿ ಹರುಷಬಡುವದು ದೈವದಲ್ಲಿಲ್ಲವೆಂದು ನಿಸ್ಪೃಹವೃತ್ತಿಯವಳಾದ ಗಂಗಕ್ಕನು ಎದುರಿನಲ್ಲಿ ಎಷ್ಟೋ ಸಾರೆ ಅಂದಿದ್ದರೂ ದುರ್ಗಾಬಾಯಿಯ ದುರ್ಗಮವಾದ ಹೃದಯದಲ್ಲಿ ಅದು ನಟ್ಟಿದಿಲ್ಲ.

ರಂಗಪಂಚಮಿಯ ಉತ್ಸವವು ಚಂದ್ರಪುರದಲ್ಲಿ ಒಳ್ಳೆಯ ವಿಜೃಂಭಣೆಯಿಂದ ನೆರವೇರಿಸಲ್ಪಡುತ್ತಿತ್ತು. ಎಷ್ಟೋ ಜನ ಬಾಲಬಾಲಿಕೆಯರೂ, ತರುಣತರುಣಿಯರೂ ಒಬ್ಬರ ಮೇಲೊಬ್ಬರು ಓಕಳಿಯನ್ನು ಎರಚುತ್ತಿದ್ದರು. ಊರಲ್ಲಿ ಓಕಳಿಯ ಬಂಡಿಗಳ ಮೆರೆವಣಿಗೆಯು ಹೊರಡುತ್ತಿತ್ತು. ರಂಗಪಂಚಮಿಯ ದಿವಸ ಚಂದ್ರಪುರದ ನಾಗರಿಕರನ್ನು ನೋಡಿದರೆ ರಣಾಂಗಣದಿಂದ ಜಯಶಾಲಿಗಳಾಗಿ ಬಂದ ಶೂರ ದಂಡಾಳುಗಳೋ ಏನೋ, ಎಂಬ ಭಾವನೆಯು ಹುಟ್ಟುತ್ತಿತ್ತು.

ತನ್ನ ಸ್ನೇಹಿತರಿಗೆ ಓಕಳಿಯನ್ನು ಹಾಕಬೇಕೆಂದು ಮನೋಹರನು ಜೀಕಳಿಯನ್ನು ತುಂಬಿದ್ದನು. ಸಾಧಾರಣ ತರದ ಉಡಿಗೆತೊಡಿಗೆಗಳನ್ನು ಹಾಕಿಕೊಂಡು ಅವನು ತನ್ನ ಮಿತ್ರನಾದ ಗೋಪಾಲನ ಮನೆಗೆ ಹೋಗುವದಕ್ಕೆ ಸಿದ್ಧನಾದನು. ಅಷ್ಟರಲ್ಲಿ ಅವನ ಪತ್ನಿಯಾದ ಮನೋರಮೆಯು ಸಹಜವಾಗಿ ಅವನ ಕೋಣೆಯಲ್ಲಿ ಬಂದಳು. ಕೂಡಲೆ ಮನೋಹರನು ಜೀಕಳಿಯನ್ನು ಕೈಯಲ್ಲಿ ತೆಗೆದುಕೊಂಡು ಅವಳಿಗೆ ಗುರಿಯಿಟ್ಟು ಬೆಣೆಯನ್ನೊತ್ತಲು, 'ಚಿಲ್' ಎಂದು ಓಕಳಿಯು ಸಿಡಿದು ಅವಳು ಉಟ್ಟಿರುವ ಕೊಯಿಮತ್ತೂರ ಪತ್ತಲವೆಲ್ಲ ಬಣ್ಣದಿಂದ ತೊಯ್ದುಹೋಯಿತು. ಮನೋಹರನು ಗಹಗಹಿಸಿ ನಗಹತ್ತಿದನು. "ಇದೆಂಥ ಹುಡುಗಾಟಿಕೆಯು? ಬೆಲೆಯುಳ್ಳ ಪತ್ತಲವು ಬಣ್ಣ ಬಿದ್ದು ಕೆಟ್ಟುಹೋಯಿತು! ಅತ್ತೆಯವರು ನೋಡಿದರೆ ಏನಂದಾರು?" ಎಂದು ಮನೋರಮೆಯು ಗಾಬರಿಯಾಗಿ ನುಡಿದಳು. "ಅದಕ್ಕೇಕೆ ಇಷ್ಟು ಬೆದರುವೆ? ಇಂದು ರಂಗಪಂಚಮಿಯೆಂಬದು ಅವಳಿಗೆ ಗೊತ್ತಿಲ್ಲವೇನು?"

"ರಂಗಪಂಚಮಿಯ ಯೋಗವು ನನ್ನ ಮೇಲೆ ಬರುತ್ತದೆಂದು ತಿಳಿದಿದ್ದರೆ ನಾನು ಈ ಪತ್ತಲವನ್ನುಡುತ್ತಿದ್ದಿಲ್ಲ. ಜೀಕಳಿಯು ಒಳ್ಳೆಯ ಬಿಗುವಿನದಿರುವದು; ತುಸು ಒತ್ತಿದ್ದಕ್ಕೆ ಮೈತುಂಬ ಬಣ್ಣವು ಬಿದ್ದಿತು." ಎಂದು ನುಡಿದು ಮನೋರಮೆಯು ಅದನ್ನು ಕೈಯಲ್ಲಿ ತೆಗೆದುಕೊಂಡು ದೂರ ಸರಿದು ಮನೋಹರನ ಮೇಲೆ ಗುರಿಯಿಟ್ಟು ಒಳ್ಳೆಯ ಕಸುವಿನಿಂದ ಬೆಣೆಯನ್ನು ಅದುಮಿದಳು. ಮನೋಹರನ ಉಡಿಗೆತೊಡಿಗೆಗಳೆಲ್ಲ ಓಕಳಿಯಿಂದ ತೊಯ್ದುಹೋದವು. ಮನೋರಮೆಯು ನಗುತ್ತ ನಿಂತಳು. "ಮುಯ್ಯಕ್ಕೆ ಮುಯ್ಯ ತೀರಿಸಿದೆ!" ಎಂದು ನುಡಿದು ಮನೋಹರನು ಅವಳ ಕೈಯೊಳಗಿನ ಜೀಕಳಿಯನ್ನು ಜುಲುಮೆಯಿಂದ ತೆಗೆದುಕೊಂಡು ಬೆಣೆಯನ್ನು ಒತ್ತಿದನು. ಅವನ ಸಾಹಸವು ನಿಷ್ಫಲವಾಯಿತು. ಅದರೊಳಗಿನ ಓಕಳಿಯೆಲ್ಲ ತೀರಿದ್ದರಿಂದ ಅವನು ಭಗ್ನಮನೋರಥನಾಗಿ—

"ಉಳಿದುಕೊಂಡೆ!" ಎಂದು ಹತಾಶನಾಗಿ ನುಡಿದನು. "ಅಪ್ಪಯ್ಯಾ ! ಪತ್ತಲವೆಲ್ಲ ಓಕಳಿ ಮುಣುಗಿಹೋಗಿದ್ದರೂ ಇವರ ಮನಸ್ಸಿಗೆ ತೃಪ್ತಿಯಾಗಿಲ್ಲ......"

"ಮನೂ, ಇದೇನು ಹುಡುಗಾಟಿಕೆಯೋ ? ನಾಲ್ವತ್ತು ರೂಪಾಯಿಯು ಪತ್ತಲವನ್ನು ಕೆಡಿಸಿಬಿಟ್ಟೆ ! ರಮೇ, ನಿನಗೂ ನಾಚಿಕೆಯಿಲ್ಲವೇ ? ಏನು ಹುಚ್ಚಾಟ ವಿದು ! ಇಂಥ ಅಲೌಕಿಕತ್ವವನ್ನು ನಾನು ಎಲ್ಲಿಯೂ ನೋಡಲಿಲ್ಲ. ನೀವು ದೇಶದ ಮೇಲೆ ಹೆಚ್ಚಿನ ಗಂಡಹೆಂಡರಾದಿರಿ; ಮನೋರಮೇ, ಆ ಮೂರ್ಖನಿಗೆ ನಾಚಿಕೆ ಯಿಲ್ಲವೆಂದು ಹೆಂಗಸಾದ ನಿನಗೂ ನಾಚಿಕೆಯಿಲ್ಲವೇ?" ಎಂದು ದುರ್ಗಾಬಾಯಿಯು ಅಲ್ಲಿಗೆ ಬಂದು ಕ್ರೋಧಯುಕ್ತಳಾಗಿ ಮಾತಾಡಲು ಇಬ್ಬರ ಮುಖಗಳೂ ಕಪ್ಪಿಟ್ಟವು. ಅವರು ಅವನತಮುಖರಾಗಿ ಸುಮ್ಮನೆ ನಿಂತರು. ಅವರು ಸುಮ್ಮನೆ ನಿಂತದ್ದನ್ನು ನೋಡಿ ದುರ್ಗಾಬಾಯಿಯು ತನ್ನ ಆವೇಶವನ್ನು ಮತ್ತಿಷ್ಟು ಹೆಚ್ಚುಮಾಡಿ–

"ಮನೂ, ಹೆಂಡತಿಯನ್ನು ಹೀಗೆ ತಲೆಯ ಮೇಲೆ ಏರಿಸಿಕೊಂಡರೆ ಅವಳು ನಿನ್ನ ತಲೆಯ ಮೇಲೆ ಮೆಣಸು ಅರೆಯುವದೆ ಬಿಡುವಳೇ ?"

"ಅವ್ವಾ, ಸುಮ್ಮನೆ ಏಕೆ ಸಿಟ್ಟುಮಾಡುವೆ ? ನಮ್ಮಿಂದ ಅಸಂಗತವರ್ತನ ವೇನು ಘಟಿಸಿತು ? ಓಕಳಿಯನ್ನು ಹಾಕುವದು ಇಂದಿನ ಕರ್ತವ್ಯವೇ ಇರುವ ದಲ್ಲವೆ ?"

"ಜನರು ಮನಬಂದಂತೆ ಕುಣಿಯುವರೆಂದು ನೀನೂ ಹಾಗೆ ಮಾಡತೊಡ ಗಿರುವೆಯೇನು ? ಹೆಂಡರಿಗೆ ಸಲಿಗೆಯನ್ನು ಕೊಟ್ಟರೆ ಅವರು ತಮ್ಮ ಗಂಡಂದಿ ರನ್ನು ಪೇಟೆಯಲ್ಲಿ ಮಾರುವರು. ಇನ್ನು ಮೇಲೆ ಇಂಥ ವರ್ತನವು ನನ್ನ ಕಣ್ಣಿಗೆ ಬಿದ್ದರೆ ನನಗೇನೂ ಸಹನವಾಗುವದಿಲ್ಲ ನೋಡು!" ಎಂದು ನುಡಿದು ಮನೋ ರಮೆಯನ್ನು ಕುರಿತು ದುರ್ಗಾಬಾಯಿಯು– "ಎಲೇ, ಗಯ್ಯಾಳೀ, ಮನೆಯಲ್ಲಿ ಯಾರ ಭಯವೂ ನಿನಗೆ ಇಲ್ಲದ ಹಾಗಾಯಿತೇನು ? ಅವನ ಮೇಲೆ ಓಕಳಿಯನ್ನು ಹಾಕಲಿಕ್ಕೆ ನಿನಗೆ ನಾಚಿಕೆ ಬರಲಿಲ್ಲವೇ ? ಸಾಧುಭಾವದ ಗಂಡನೆಂದು ನೀನು ಮೇರೆವಪ್ಪಿ ನಡೆಯತೊಡಗಿರುವೆ."

"ಸಣ್ಣ ಮಾತನ್ನು ಬೆಳಿಸಿ ಬಾಯಿಗೆ ಬಂದ ಹಾಗೆ ಅನ್ನತೊಡಗಿರುವಿರಿ." ಎಂದು ಮನೋರಮೆಯು ನುಡಿದ ಕೂಡಲೆ ದುರ್ಗಾಬಾಯಿಯು ದುರ್ಗೆಯ ಅವತಾರವನ್ನೇ ತಾಳಿ– "ಶಟವೀ, ಮನೆಗೆ ಬಂದು ಇನ್ನೂ ಆರು ತಿಂಗಳಾಗಿಲ್ಲ; ಈಗಲೆ ಉದ್ಧಟಳಾಗಿ ಎದುರುತ್ತರವನ್ನು ಕೊಡುವದಕ್ಕಾರಂಭಿಸಿದೆಯಲ್ಲವೇ!

ಬಾಯಿಗೆ ಒರೆ ಕೊಟ್ಟೇನು ! ತಿರುಗಿ ವಾದಿಸಲಿಕ್ಕೆ ನಾನು ನಿನ್ನ ಸರಿಕದವಳೆಂದು ತಿಳಿದಿರುವೆಯೇನೇ ಹೊಯ್ಕಾಲೀ ! " ಎಂದು ನುಡಿದು ಮನೋಹರನನ್ನು ಕುರಿತು ಸಿಟ್ಟಿನಿಂದ— " ಮನೂ, ಇವಳು ತುಸು ನೀರಿನಲ್ಲಿ ಮುಳುಗುವ ಹೆಣ್ಣಲ್ಲ. ಕತ್ತೆಗೆ ಲತ್ತೆಯ ಪೆಟ್ಟೇ ಯೋಗ್ಯವು. ಇನ್ನು ಮೇಲೆ ಇವಳನ್ನು ಬಡಿಗೆಯಿಂದಲೇ ಮಾತನಾಡಿಸುತ್ತಿದ್ದರೆ ಅಂಕೆಯಲ್ಲಿರುವಳು. "

ಮನೋರಮೆಯು ಪತಿಗೃಹಕ್ಕೆ ಬಂದ ಮೇಲೆ ಇಂಥ ಪ್ರಸಂಗವು ಘಟಸಿದ್ದಿಲ್ಲ. ಅತ್ತೆಯ ಕ್ರೂರಸ್ವಭಾವವನ್ನು ನೋಡಿ ಅವಳು ' ಥರಥರ' ನಡುಗಿದಳು. ಇಷ್ಟು ಹೊತ್ತಿನ ವರೆಗೆ ಅವನತಮುಖಿಯಾಗಿದ್ದ ಅವಳು ಸ್ವಾಭಾವಿಕವಾಗಿ ಮೋರೆಯನ್ನೆತ್ತಿ ಅತ್ತೆಯನ್ನು ನೋಡಲು, ಅವಳು ಮಹಿಷಾಸುರಮರ್ದಿನಿಯಂತೆ ಮನೋರಮೆಯ ಕಣ್ಣಿಗೆ ತೋರಿದಳು. ತನ್ನನ್ನು ನೋಡುವದನ್ನು ಕಂಡು ದುರ್ಗಾಬಾಯಿಯು ಮನೋರಮೆಗೆ—

" ಕೆಟ್ಟಗಣ್ಣಿಲೆ ನೋಡುತ್ತೀಯಾ ವಿಗಡೀ ! " ಎಂದು ಗರ್ಜಿಸಲು ಅವಳ ಕೈಕಾಲೇ ಹೋಗಿ ನಿಂತಲ್ಲಿಯೇ ನೆಲಕ್ಕೆ ಕುಸಿಬಿದ್ದಳು.

---

## ಎರಡನೆಯ ಜ್ವಾಲೆ

---

ರಾಕ್ಷಸ ಸ್ವಭಾವದವಳಾದ ದುರ್ಗಾಬಾಯಿಯು ನಿಮಿತ್ತವಿಲ್ಲದೆ ಮಗನಿಗೂ, ಸೊಸೆಗೂ ಕಠೋರವಾದ ಮಾತುಗಳನ್ನಾಡುತ್ತಿದ್ದಳು. ಮನೋಹರನು ಸಹನಶೀಲನಿದ್ದುದರಿಂದ ತಾಯಿಯ ಉನ್ಮತ್ತತನವನ್ನು ಸೈರಿಸಿದ್ದನು. ಮನೋರಮೆಯನ್ನು ಕಂಡರಂತೂ ಅವಳು ಬೆಂಕಿಯನ್ನೇ ಕಾರುತ್ತಿದ್ದಳು. ನಿಷ್ಕಾರಣವಾಗಿ ಅವಳು ಎಷ್ಟೋ ಸಾರೆ ಮನೋರಮೆಗೆ ಒನಿಕೆಯ ಪೆಟ್ಟುಗಳನ್ನು ಕೊಟ್ಟಿದ್ದಳು. ಬೈಗಳ ಸುರಿಮಳೆಯು ಅವ್ಯಾಹತವಾಗಿ ನಡೆದೇ ಇರುತ್ತಿತ್ತು. ಸುವಿಚಾರಿಣಿಯೂ, ಸದ್ವರ್ತನವುಳ್ಳವಳೂ ಆದ ಮನೋರಮೆಯು ತನ್ನ ಅತ್ತೆಯ ಈ ದುಷ್ಟತನವನ್ನು ಸಹಿಸಿಕೊಂಡಿದ್ದಳು. ಅವಳು ತನ್ನ ಪತಿಯ ಮುಂದೆ ಅತ್ತೆಯ ಕೃತಿಯನ್ನು ಉಸಿರುತ್ತಿದ್ದಿಲ್ಲ; ಆದರೂ ಮನೋಹರನಿಗೆ ತಾಯಿಯ ಕಠೋರತನವು ತಿಳಿಯದೆ ಇದ್ದಿಲ್ಲ. ತಾಯಿಯ ವರ್ತನವನ್ನು ಪ್ರತ್ಯಕ್ಷವಾಗಿ ಅಲ್ಲಗಳೆಯುವ ಧೈರ್ಯವು ಅವನಲ್ಲಿಲ್ಲದ್ದರಿಂದ, ಮನೋರಮೆಯು ಅತ್ತೆಯ ಪೀಡೆಯನ್ನೆಲ್ಲ ಸಹಿಸಬೇಕಾಗಿತ್ತು, ನಿರಪರಾಧಿನಿಯಾದ ತನ್ನ ಪತ್ನಿಯು ದಿನಾಲು ಅನುಭವಿಸುವ ಯಾತನೆಗಳನ್ನು ನೋಡಿ ನೋಡಿ, ಮನೋಹರನು ಮನಸ್ಸಿನಲ್ಲಿ ಬಹಳೇ ನೊಂದುಕೊಂಡಿದ್ದನು. ಇದ್ದ ನೀರುಗಳನ್ನು ಬಚ್ಚಲಕ್ಕೆ ಹಾಕಿ ನೀರು ಹೊರ

ಲಿಕ್ಕೆ ಹಚ್ಚುವದು, ಮಾಡಿದ ಅಡಿಗೆಯಲ್ಲಿ ಸೆರೆ ಉಪ್ಪನ್ನು ಇಲ್ಲವೆ ಕಾರವನ್ನು ಹಾಕಿ ಅಡಿಗೆಯನ್ನು ಕೆಡಿಸಿ ಬಾಯಿಗೆ ಬಂದಂತೆ ಬೈಯುವದು, ಕೋಲಿಗೆ ಹಾಕಿದ ಸೀರೆಪತ್ತಲಗಳನ್ನು ಕೈಮುಟ್ಟಿ ಹರಿದು ತಪ್ಪು ಹೊರಿಸಿ ದಂಡಿಸುವದು, ಕಂಡ ಕಂಡ ಗಂಡಸರೊಡನೆ ಮಾತಾಡುವ ದೋಷವನ್ನು ಹೊರಿಸಿ ಶಾಸನವನ್ನು ಮಾಡುವದು ಮೊದಲಾದ ಅನೇಕಾನೇಕ ಕಲೆಗಳು ದುಷ್ಟ ಅತ್ತೆಯರ ನಿತ್ಯ ವ್ಯವಹಾರಗಳಾಗಿರುವವೆಂಬ ಹೇಳಲಿಕ್ಕೆ ಬೇಡ. ನಮ್ಮ ಸಮಾಜದಲ್ಲಿ ದುರ್ಗಾ ಬಾಯಿಯಂಥ ಅತ್ತೆಯಂದಿರು ಸದ್ಯದ ಸುಧಾರಣೆಯ ಪರಿಸ್ಥಿತಿಯಲ್ಲಿ ಇನ್ನೂ ಇರುವದು ಶೋಚನೀಯವಲ್ಲವೇ ? ದುರ್ಗಾಬಾಯಿಯಲ್ಲಂತು ಎಲ್ಲ ಪ್ರಕಾರದ ಕಲ್ಯಾಣಗುಣಗಳು ಪರಿಪೂರ್ಣವಾಗಿ ಇದ್ದವು ! ಅಂದಮೇಲೆ ಮನೋರಮೆ ಯಂಥ ಮೃದುಸ್ವಭಾವದ ಅಬಲೆಯು ಅನುಭವಿಸುವ ದುಃಖಪರಂಪರೆಯನ್ನು ಕಲ್ಪಿಸಲು ಕ್ರೂರ ಅತ್ತೆಯರಿಂದ ಯಾತನೆಯನ್ನು ಅನುಭವಿಸಿದಂಥ ಮಹಿ ಳೆಯರೇ ಸಮರ್ಥರಲ್ಲದೆ, ಅನನುಭವಿಕ ಪುರುಷವೃಂದಕ್ಕೆ ಅವರ ಗಂಧವು ಕೂಡ ತಿಳಿಯಲಿಕ್ಕಿಲ್ಲ.

ಹನ್ನೊಂದು ಗಂಟೆ ರಾತ್ರಿಯಾಗಿತ್ತು. ಮನೋಹರನು ಮಂಚದ ಮೇಲೆ ಒರಗಿ, '**ಶಾರದೆ**'ಯ ಸಂಚಿಕೆಯೊಂದನ್ನು ತೆಗೆದುಕೊಂಡು ಅದರಲ್ಲಿಯ '**ಹೆಳ ವನ ಕಟ್ಟೆಯ ಗಿರಿಯಮ್ಮನ ಚರಿತ್ರ**'ವನ್ನು ಓದಹತ್ತಿದ್ದನು. ಪಾವನಕರ ವಾದ ಆ ಚರಿತ್ರೆಯನ್ನೋದಿ ಅವನು ತಲೆದೂಗಿದನು. ಅಷ್ಟರಲ್ಲಿ ಪೈಜಣದ ಧ್ವನಿಯಾಯಿತು. ಮುಖವನ್ನು ಮೇಲೆತ್ತಿ ನೋಡುತ್ತಾನೆ, ಎದುರಿನಲ್ಲಿ ಮನೋ ರಮೆಯು ಮ್ಲಾನವದನೆಯಾಗಿ ನಿಂತಿದ್ದಳು. ಅವಳ ಬಾಡಿದ ಮುಖವನ್ನು ನೋಡಿ ಅವನ ಕರಳು ಕರಗಿತು.

"ರಮೇ, ಬಾ, ಕುಳಿತುಕೋ. ಯಾಕೋ ಖಿನ್ನಳಿದ್ದಂತೆ ತೋರುವೆ." ಎಂದು ಅವಳ ಕೈಯನ್ನು ಹಿಡಿದು ಮಂಚದ ಮೇಲೆ ಕುಳ್ಳಿರಿಸಿ–

"ಅವ್ವನು ಸಿಟ್ಟು ಮಾಡಿದಳೇನು?" ಮನೋಹರನು ಕಕ್ಕುಲತೆಯಿಂದ ಅವಳ ಭುಜದ ಮೇಲೆ ಕೈಯನ್ನಿಟ್ಟು ಕೇಳಿದನು.

ಪತಿಗೆ ತನ್ನ ದುಃಖದ ಗಂಧವು ಕೂಡ ಹತ್ತಬಾರದೆಂದು ಅವಳು ಮನ ದಣಿ ಶೋಕಮಾಡಿ ಬಂದಿದ್ದರೂ, ಹೊಟ್ಟೆಯಲ್ಲಿ ಹೊತ್ತುತ್ತಿರುವ ದುಃಖಾ ಗ್ನಿಯು ಒಮ್ಮೆಲೆ ಹೇಗೆ ತಾನೆ ಕಡಿಮೆಯಾಗುವದು ? ಪತಿಯ ಪ್ರೇಮದ ಮಾತುಗಳನ್ನು ಕೇಳಿಯಂತೂ ಅವಳ ಉದರದಲ್ಲಿ ಹುದುಗಿಕೊಂಡಿದ್ದ ದುಃಖವು ಒಮ್ಮೆಲೆ ಹೊರಬಿದ್ದು ಬಿಟ್ಟಿತು. ಅವಳ ನೇತ್ರಗಳು ಸಜಲವಾದವು. ಒಂದೆರಡು

ಬಿಂದುಗಳು ಕೂಡ ಕಪೋಲದ ಮೇಲೆ ಬಿದ್ದವು. ಮನೋಹರನು ಪತ್ನಿಯ ಸ್ಥಿತಿಯನ್ನು ನೋಡಿ ಕಳವಳಗೊಂಡು ಅವಳ ಅಶ್ರುಗಳನ್ನು ತನ್ನ ಸೆರಗಿನಿಂದ ಒರಿಸಿ

"ನಿನ್ನ ಮನಸ್ಸಿನೊಳಗಿನ ದುಗುಡವೇನು? ಹೇಳುವದಿಲ್ಲವೇ?"

"ಏನೂ ಇಲ್ಲ ಬಿಡಿರಿ." ಎಂದು ಮನೋರಮೆಯು–'ಅದು ಯಾವ ಪುಸ್ತಕವು?" ಎಂದು ಬುದ್ಧಿಪೂರ್ವಕವಾಗಿ ವಿಷಯಾಂತರಮಾಡಿದಳು.

"ಇದು **ಶಾರದೆಯ** ಸಂಚಿಕೆಯು, ಇದರಲ್ಲಿ **ಹೆಳವನ ಕಟ್ಟೆಯ ಗಿರಿಯಮ್ಮನ ಚರಿತ್ರೆಯು** ಬಲು ಮನೋಹರವಿರುವದು. ರಮೇ, ನೀನು ಗಿರಿಯಮ್ಮನಂತೆ ಸಹನಶೀಲಳಿರುವಿ."

"ಆ ಮಹಾಮಹಿಮಳ ಚರಿತ್ರವನ್ನು ಓದಿರುವೆನು. ಅವಳ ಪಾದ ರಜದಲ್ಲಿಯ ಒಂದು ಕಣದ ಯೋಗ್ಯತೆಯೂ ನನ್ನಲ್ಲಿಲ್ಲದಿರುವಾಗ, ವೃಥಾ ಅತಿರೇಕವಾದ ವರ್ಣನೆಯನ್ನು ಮಾಡುವಿರಿ."

"ಪ್ರಿಯೇ, ನಾನು ಮುಖಸ್ತುತಿಯನ್ನು ಸರ್ವಥಾ ಮಾಡುವದಿಲ್ಲ. ನೀನು ಅವ್ವನ ಪೀಡೆಯನ್ನು ಸಹನಮಾಡಿಕೊಳ್ಳದಿದ್ದರೆ, ಇಷ್ಟು ಹೊತ್ತಿಗೆ ನಮ್ಮ ಸ್ಥಿತಿಯು ಯಾವ ಮನೆಗೆ ಬರುತ್ತಿತ್ತೆಂಬದನ್ನು ಕಲ್ಪಿಸುವದರಿಂದ ಕೂಡ ದುಸ್ತರವಾದ ದುಃಖವೆನಿಸುತ್ತದೆ! ಉಭಯಕುಲಕ್ಕೂ ಕೀರ್ತಿಯನ್ನು ತರುವ, ಹಾಗು ಕುಲಕೋಟಿಯನ್ನು ಉದ್ಧಾರಮಾಡುವ ಸದ್ಗುಣಗಳು ಅಂದರೆ ಸಾಧ್ವೀಮಣಿಗಳಲ್ಲಿ ಅವಶ್ಯವಾಗಿ ಇರಬೇಕಾದ ನೀತಿಯು ನಿನ್ನಲ್ಲಿ ಇರುವದು."

"ತಮ್ಮನ್ನು ಕಂಡಕೂಡಲೆ ನನ್ನ ದುಃಖವು ಸಮೂಲವಾಗಿ ನಾಶವಾಗುತ್ತದೆ. ನಿಮ್ಮ ಪ್ರೇಮಚ್ಛತ್ರವು ನನ್ನ ಮೇಲಿರುವಾಗ ಉಳಿದ ಯಾತನೆಗಳು ನನ್ನನ್ನು ಬಾಧಿಸಲಾರವು."

"ಮನೋರಮೇ, ನಿನ್ನನ್ನು ಅವ್ವನು ಹೆಜ್ಜೆಹೆಜ್ಜೆಗೆ ಪೀಡಿಸುವದನ್ನು ನಾನು ಇನ್ನು ತಾಳಲಾರೆನು. ಅವಳ ಸಮಾಚಾರವನ್ನೊಮ್ಮೆ ತೆಗೆದುಕೊಂಡೇ ತೀರಬೇಕೆಂದು ನಿಶ್ಚಯಿಸಿರುವೆನು. ಹೀಗೆಯೇ ಸ್ವಸ್ಥವಾಗಿದ್ದು ಅವಳ ದುಷ್ಟತನವನ್ನು ನಡೆಯಗೊಡುವದರಿಂದ ನಿರಪರಾಧಿನಿಯಾದ ನೀನು ಅವಳ ಛಲದಿಂದ ಬೆಂದು ಬೆಂಡಾಗಿ ಹೋಗುವೆ."

"ಅಂಥ ಸಾಹಸಕ್ಕೆ ಹೋಗಕೂಡದು. ಜನ್ಮಸಿದ್ಧವಾದ ಗುಣವು ಯಾವ ಉಪಾಯಗಳಿಂದಲೂ ಬೇರೆಯಾಗುವದಿಲ್ಲ. ಹೆಂಡತಿಯ ಪಕ್ಷಗಟ್ಟಿ ಮಾತಾಡುತ್ತೀರೆಂದು ಮತ್ತಿಷ್ಟು ರೇಗಿಗೆದ್ದು ಇಬ್ಬರನ್ನೂ ಅವರು ಗೋಳಾಡಿಸಿಯಾರು. ಹೆಂಡತಿಯ ಮಾತನ್ನು ಕೇಳಿ ಜಗಳಾಡುವಿರೆಂಬ ಅಪಕೀರ್ತಿಯನ್ನು ಹೊರಬೇಡಿರಿ."

ಪತ್ನಿಯ ಸದ್ಗುಣವನ್ನೂ, ಅವಳ ತಿಳಿವಳಿಕೆಯನ್ನೂ ನೋಡಿ ಮನೋಹರನಿಗೆ ಪರಮಾನಂದವಾಯಿತು. ಅವನು ಸ್ವಾಭಾವಿಕವಾಗಿ ಅವಳ ಬಲದ ಹಸ್ತವನ್ನು ಹಿಡಿಯಲು " ಹಾಯ! " ಎಂದು ಮನೋರಮೆಯು ಉದ್ಗಾರ ತೆಗೆದಳು.

" ಯಾಕೆ? " ಎಂದು ಮನೋಹರನು ಅವಳ ಹಸ್ತವನ್ನು ನೋಡಲು ಬಲವಾದ ಗಾಯವಾಗಿತ್ತು. ಅವನು– "ಇದೇನು ಮಾಡಿಕೊಂಡಿರುವೆ? " ಎಂದು ಗಾಬರಿಯಿಂದ ಕೇಳಲು ಮನೋರಮೆಯು ಬಿಕ್ಕಿ ಬಿಕ್ಕಿ ಅಳಹತ್ತಿದಳು.

ತನ್ನ ತಾಯಿಯಿಂದ ಈ ಅನರ್ಥವು ಸಂಭವಿಸಿರುವದೆಂದು ಮನೋಹರನು ಸಂತಪ್ತನಾಗಿ ತಾಯಿಯೊಡನೆ 'ಲೆಗ್ಗಿ ಲೆಗ್ಗಿ' ಜಗಳವನ್ನು ಮಾಡಿ ಇನ್ನೊಮ್ಮೆ ತನ್ನ ಪತ್ನಿಯ ಹೆಸರು ತೆಗೆಯದಂತೆ ಮಾಡಿಬಿಡಬೇಕೆಂದು ಮಂಚದಿಂದ ಎದ್ದನು. ಪತಿಯ ಮನೋಗತವನ್ನು ಅವನ ಮುಖಲಕ್ಷಣದಿಂದಲೇ ತಿಳಿದು ಅವನನ್ನು ತಡೆದು– "ನೀವು ಅತ್ತೆಯವರೊಡನೆ ಈ ಉಸಾಬರಿಯನ್ನು ತೆಗೆದು ಜಗಳಾಡಿದರೆ ನನ್ನ ಕೊರಳಾಣೆ. " ಎಂದು ಮನೋರಮೆಯು ಅವನನ್ನು ತಡೆದಳು.

" ಅನುಭವಿಸುವದು ನಿನಗೆ ಬೇಕಾಗಿದೆ! " ಎಂದು ಸಿಟ್ಟಿನಿಂದಲೇ ಮನೋಹರನು ನುಡಿದು– "ನಡೆದ ಸಂಗತಿಯನ್ನು ಹೇಳುವೆಯೋ ಇಲ್ಲವೋ ? "

" ಅಡಿಗೆಯ ಮನೆಯೊಳಗಿನ ಕ್ಷುಲ್ಲಕವಾದ ಮಾತುಗಳನ್ನು ಕೇಳುವದರಿಂದ ಫಲವೇನು!" "ಕ್ಷುಲ್ಲಕವಾದ ಮಾತೇ ಇದು? ಪ್ರಾಣವು ಹೋಗುವ ವರೆಗೆ ಪ್ರಸಂಗವು ಬಂದರೂ ನನ್ನ ಮುಂದೆ ಹೇಳಬಾರದೆಂದು ನಿಶ್ಚಯಿಸಿರುವದಾಗಿ ಕಾಣುತ್ತದೆ. ಇಂದಿನ ವೃತ್ತಾಂತವೇನು ? ಕೈಗೆ ಬಲವಾದ ಗಾಯವಾಗಿರುವ ಕಾರಣವೇನು ? ನಿಜವಾದ ಸಂಗತಿಯನ್ನು ಹೇಳಲಿಕ್ಕೇ ಬೇಕು. "

ಪತಿಯ ಹಟವನ್ನು ನೋಡಿ ನಿರ್ವಾಹವಿಲ್ಲದೆ ಮನೋರಮೆಯು– "ಇಂದು ಸಂಜೆಯ ಮುಂದೆ ಎಲ್ಲ ಪಾತ್ರೆಗಳನ್ನು ನೀರಿನಿಂದ ತುಂಬಿದ್ದೆನು. ಅತ್ತೆಯವರು ಎಲ್ಲ ನೀರನ್ನು ಬಚ್ಚಲಕ್ಕೆ ಸುರಿವಿ ' ನೀರು ತರಲಿಕ್ಕೆ ಕೂಡಲಿಲ್ಲವೇನು ' ಎಂದು ಕೇಳಿದರು, ' ಸಂಜೆಯ ಮುಂದೆ ಒಂದೂ ಉಳಿಯದಂತೆ ಎಲ್ಲ ಪಾತ್ರೆಗಳನ್ನು ತುಂಬಿದ್ದೆನು. ' ಎಂದು ನುಡಿದು ಹಂಡೆಗಳಿದ್ದಲ್ಲಿ ಹೋಗುತ್ತೇನೆ, ಎಲ್ಲವೂ ತೆರವಾಗಿದ್ದವು. ನನಗೆ ಬಹು ಸೋಜಿಗವಾಯಿತು ! ನೀರು ತಂದಿರುವೆನೋ ಇಲ್ಲವೋ ಎಂದು ನೆನಪುಮಾಡಿಕೊಂಡೆನು; ವನಿತೆಯೂ ನಾನೂ

ಕೂಡಿಯೇ ತಂದದ್ದು ಸ್ಮರಣೆಯಲ್ಲಿ ಬಂತು. ಇಂದು ಇಬ್ಬರೂ ಅವರ ಮನೆಯ ನೀರನ್ನು ತೀರಿಸಿ, ಹಿಂದುಗಡೆ ನಮ್ಮ ಮನೆಗೆ ನೀರು ಹಾಕಿದ್ದೆವು. ಸುಳ್ಳು ಹೇಳು ವೆನೆಂಬ ಸಂಶಯವಿದ್ದರೆ ನಾಳೆ ವನಿತೆಯನ್ನು ಕೇಳಿರಿ. ಇಷ್ಟು ನೀರು ಒಮ್ಮೆಲೆ ಹೇಗೆ ತೀರಿದವೆಂದು ವಿಚಾರಮಾಡುವಷ್ಟರಲ್ಲಿ ಅತ್ತೆಯವರೇ ಬೇಕೆಂದು ಬಚ್ಚಲಕ್ಕೆ ಸುರಿವಿರಬಹುದೆಂಬ ವಿಚಾರವು ಬಂದು ಕೈಯಲ್ಲಿ ದೀಪವನ್ನು ತೆಗೆದುಕೊಂಡು ಹಿತ್ತಲದಲ್ಲಿ ಹೋಗಿ ನೋಡುತ್ತೇನೆ, ಬಚ್ಚಲ ಹರಿಯ ಹತ್ತರದಲ್ಲಿದ್ದ ಬಾಳೆಯ ಗಿಡದ ಮಡಿಗಳು ನೀರಿನಿಂದ ತುಂಬಿದ್ದವು ! ಪ್ರಸಂಗವು ತನ್ನ ಮೇಲೆ ಬಂದೀ ತೆಂದು ಅತ್ತೆಯು–

'ಬಚ್ಚಲಕ್ಕೆ ನೀರು ಸುರಿವಿ ನನ್ನ ಮೇಲೆ ನಿಮಿತ್ತಕೊಡಬೇಕೆಂದು ಮಾಡಿ ರುವೆಯೆ'ಂದು ಅಲ್ಲಿಯೇ ಬಿದ್ದಿದ್ದ ಮುಗಿಚುವ ಕೈಯಿಂದ ಹೊಡೆಯ ಬಂದರು. ಎಲ್ಲಿಯಾದರೂ ಆಯಕಟ್ಟಿಗೆ ಪೆಟ್ಟು ಬಿದ್ದೀತೆಂದು ನಾನು ಕೈಯನ್ನು ಅಡ್ಡ ತರಲು ಶಸ್ತ್ರದಂತೆ ಚೂಪಾಗಿದ್ದ ಅದನ್ನು ನನ್ನ ಅಂಗೈಗೆ ಶಕ್ತಿಯಿಂದ ಚುಚ್ಚಿದರು; ಕೂಡಲೆ ರಕ್ತವು ಬಳಬಳ ಸುರಿಯಿತು. ರಕ್ತ ಬೀಳುವದು ಕಡಿಮೆಯಾದ ಮೇಲೆ ಇಲ್ಲಿಗೆ ಬಂದೆನು. ಅಂಥ ದೊಡ್ಡ ಗಾಯವೇನೂ ಆಗಿಲ್ಲ. ನೀವು ಅತ್ತೆಯವರನ್ನು ಈ ಸಂಬಂಧವಾಗಿ ಏನನ್ನೂ ಕೇಳಬೇಡಿರಿ. ನನ್ನ ಪ್ರಾರ್ಥ ನೆಯನ್ನು ಇದೊಂದು ಸಾರೆ ಮನ್ನಿಸಿರಿ. ಅಷ್ಟಿಷ್ಟಕ್ಕೆ ಪತಿಯ ಮುಂದೆ ಹೇಳು ತ್ತಾಳೆಂಬ ಹರಲೆಯನ್ನು ಹೊರಲಾರೆನು." ಎಂದು ದುಃಖದಿಂದ ಮನೋರಮೆಯು ಸಂಭವಿಸಿದ ಸಂಗತಿಯನ್ನು ಹೇಳಿದ ಕೂಡಲೆ ಮನೋಹರನು ಬಹಳೇ ಕಸಪಿಸಿ ಗೊಂಡನು.

ಅದೇ ಸೂರ್ಯೋದಯವಾಗಿತ್ತು. ಚಂದ್ರಪುರದ ಜನರು ತಮ್ಮ ತಮ್ಮ ಉದ್ಯೋಗಗಳಲ್ಲಿ ನಿರತರಾಗಿದ್ದರು. ದುರ್ಗಾಬಾಯಿಯು ಅದೇ ಎದ್ದು ಹೊರಗೆ ಪಡಸಾಲೆಯಲ್ಲಿ ಬರುವಷ್ಟರಲ್ಲಿ ಕೈಯಲ್ಲಿ ಕುಂಕುಮದ ಕರಡಿಗೆಯನ್ನು ಹಿಡಿದು ಕೊಂಡು ವನಿತೆಯು ಬಂದು–" ಮನೋರಮಾ!" ಎಂದು ಕೂಗಿದಳು.

"ಬಾರವ್ವಾ ವನಿತಾ, ಅವಳಿಗೀಗ ಮಧ್ಯರಾತ್ರಿಯು. ನೀನೂ ಚಿಕ್ಕವಳಿರುವೆ. ಹೀಗೆ ತಾಸೇರುವ ವರೆಗೆ ಮಲಗುವೆಯೇನವ್ವಾ ? ಇವಳಂತೆ ನೀನು ಮಾಡಿದರೆ ಗಂಗಕ್ಕನು ಸುಮ್ಮನಿದ್ದಾಳೇ ? ನಿನ್ನನ್ನು ನೋಡಿದರೆ ಹರುಷವಾಗುತ್ತದೆ. ಇವಳು ಹೇಗೆ ಮಾಡಿದರೂ ಸುಮ್ಮನಿರಬೇಕು; ಏನಾದರೊಂದು ಅಂದರೆ ಅತ್ತೆ ಕಟಿ ಕಟಿ ಮಾಡುತ್ತಾಳೆಂದು ಊರಲ್ಲೆಲ್ಲ ಡಂಗುರ ಹೊಡೆಯುತ್ತಾಳೆ. ನಿನ್ನಂಥ ಸದ್ಗುಣಿಗೆ ಯಾರು ಏನು ಅಂದಾರು ? ಉತ್ತಮ ಸೊಸೆಯಂದಿರು ಸಿಗಲಿಕ್ಕೆ ದೈವಬೇಕು."

ಅತ್ತೆಯ ಗರ್ಜನೆಯನ್ನು ಕೇಳಿ ಮನೋರಮೆಯು ಕೋಣೆಯ ಬಾಗಿಲ ವನ್ನು ತೆರೆದು ಹೊರಬಿದ್ದಳು. ಅವಳು ಲಗಬಗೆಯಿಂದ ಮುಖಮಾರ್ಜನ ವನ್ನು ತೀರಿಸಿ—"ವನಿತಾ, ಬಾ ಕುಳಿತುಕೋ." ಎಂದು ನುಡಿದಳು. ವನಿತೆಯು ಅವಳಿಗೆ ಕುಂಕುಮವನ್ನು ಹಚ್ಚಿ ಇಂದು ನಮ್ಮಲ್ಲಿ ಸತ್ಯನಾರಾಯಣನ ವ್ರತ ವಿದೆ. ಅಲ್ಲಿಗೇ ಊಟಕ್ಕೆ ಬಾ; ಮನೂ ಅಣ್ಣನಿಗೂ ಆಮಂತ್ರಣವಿದೆ. ಈಗ ಅವರು ಔತನವನ್ನೀಯಲಿಕ್ಕೆ ಬರಬಹುದು ಎಂದು ನುಡಿದು—"ಅತ್ತೆಯ ವರು ಅಡಿಗೆಗೆ ಬರಲಿಕ್ಕೆ ತಿಳಿಸೆಂದು ಹೇಳಿರುವರು." ಎಂದು ದುರ್ಗಾಬಾಯಿಗೆ ಹೇಳಿ "ಮನೋರಮಾ, ಕೂಡ್ರುವಂತಿಲ್ಲ. ಅವಸರವಿದೆ" ಎಂದು ವನಿತೆಯು ಲಗು ಬಗೆಯಿಂದ ನಡೆದಳು.

---

## ಮೂರನೆಯ ಜ್ವಾಲೆ

ಗೋಪಾಲನ ಮನೆಯಲ್ಲಿ ಇಂದು ಸತ್ಯದೇವನ ವ್ರತವು ಬಂಧುಜನ ರಿಗೆಲ್ಲ ಆಮಂತ್ರಣವಿತ್ತಿದ್ದನು. ತನ್ನ ಪರಮಮಿತ್ರನಾದ ಮನೋಹರನಿಗೂ, ಅವನ ಪತ್ನಿಗೂ ಔತನ ಕೊಟ್ಟಿದ್ದನು. ದುರ್ಗಾಬಾಯಿಗಾದರೂ ಅಡಿಗೆಯು ಬಡಕೊಂಡಿತ್ತು. ಗೋಪಾಲನು ಮನೋಹರನೊಡನೆ ನಡುಮನೆಯಲ್ಲಿ ಸತ್ಯ ನಾರಾಯಣನ ಮಂಟಪವನ್ನು ಕಟ್ಟತೊಡಗಿದ್ದನು. ವನಿತೆಯೂ ಮನೋರ ಮೆಯೂ ಮೇಲುಗೆಲಸವನ್ನು ಮಾಡಹತ್ತಿದ್ದರು. ಅಡಿಗೆಯ ಮನೆಯಲ್ಲಿ ದುರ್ಗಾ ಬಾಯಿಯೂ ಗೋಪಾಲನ ತಾಯಿಯಾದ ಗಂಗಕ್ಕನೂ ಪಾಕದ ಸಿದ್ಧತೆಯಲ್ಲಿ ತೊಡಗಿದ್ದರು.

ದುರ್ಗಾಬಾಯಿಯು ಮನೋರಮೆಗೆ ಪರಿಪರಿಯಿಂದ ಪೀಡೆ ಕೊಡುತ್ತಿರು ವದು ಗಂಗಕ್ಕನಿಗೆ ಗೊತ್ತಾಗಿತ್ತು. ಹೊತ್ತುದೊರೆತಾಗ ಅವಳಿಗೆ ಬುದ್ಧಿಗಲಿಸ ಬೇಕೆಂದು ಗಂಗಕ್ಕನು ಹವಣಿಸಿಕೊಂಡು ಕುಳಿತಿದ್ದಳು. ಮನೋರಮೆಯ ಕೈಗೆ ದುರ್ಗಾಬಾಯಿಯು ಗಾಯಮಾಡಿದ ಸಂಗತಿಯಾದರೂ, ಅವಳಿಗೆ ತನ್ನ ಸೊಸೆ ಯಾದ ವನಿತೆಯ ಮುಖಾಂತರವಾಗಿ ತಿಳಿದಿತ್ತು. ಮಾತಿಗೆ ಮಾತು ಹೊರಟು ದುರ್ಗಾಬಾಯಿಯು—"ನಿಮ್ಮ ವನಿತೆಯು ಕೆಲಸವಂತೆಯು ನೋಡಿರಿ! ಅವಳು ನಮ್ಮ ರಮೆಯಂತೆ ಮಾಡಿದರೆ ನೀವು ಅರೆಕ್ಷಣ ಸಹ ತಡೆಯಲಿಕ್ಕಿಲ್ಲ. ಗಂಡನ

ಕಿವಿಯಲ್ಲಿ ಏನಾದರೊಂದು ಊದಿ ಅವನ ಮನಸ್ಸು ಕೆಡಿಸುವದು, ಅತ್ತೆಯು ಪೀಡೆ ಕೊಡುತ್ತಾಳೆಂದು ಊರತುಂಬ ಹರಲಿ ಮಾಡುವದು, ಇಷ್ಟು ಕೆಲಸವನ್ನು ಮಾತ್ರ ಅವಳು ದಕ್ಷತೆಯಿಂದ ಮಾಡುವಳು."

ದುರ್ಗಾಬಾಯಿಯ ಮಾತುಗಳನ್ನು ಕೇಳಿ ಗಂಗಕ್ಕನಿಗೆ ಬಲು ಸಿಟ್ಟು ಬಂತು. ಅವಳ ಎಲ್ಲ ಕೃತಿಗಳನ್ನು ಬೈಲಿಗೆಳೆಯಬೇಕೆಂಬದು ಗಂಗಕ್ಕನ ಮನಸ್ಸಿನಲ್ಲಿ ಒಮ್ಮೆ ಬಂದು ಹೋಯಿತು. ದುಷ್ಟೆಯಾದ ಅವಳು ಮನೋರಮೆಯನ್ನು ಮತ್ತಿಷ್ಟು ನೋಯಿಸುವಳೆಂದು ತಾಳಿಕೊಂಡು–" ಸೌಜನ್ಯದ ಕಣಿಯಾದ ಅವಳಿಗೆ ಸುಮ್ಮಸುಮ್ಮನೆ ಏನಾದರೊಂದು ಹೆಸರಿಡುವಿರಿ. ದುರ್ಗಾಬಾಯಿ, ನ್ಯಾಯವಿರಲಿ, ಅನ್ಯಾಯವಿರಲಿ, ನೀವು ಸಿಟ್ಟು ಮಾಡುವಾಗ ಆ ಪ್ರಾಣಿಯು ಎಂದಾದರೂ ತುಟಿ ಎರಡು ಮಾಡಿದ್ದರೆ ಹೇಳಿರಿ ನೋಡೋಣ. ನಮ್ಮ ವನಿತೆಯು ಅವಳ ಪಾಸಂಗಕ್ಕೆ ಕೂಡ ಹತ್ತಲಾರಳು. ಘನವಂತಳಾದ ಅವಳು ಸದಾ ಸರ್ವದಾ ಪತಿಯ ಹಾಗು ನಿಮ್ಮ ಸೇವೆಯನ್ನು ಮಾಡುತ್ತಿರುವದನ್ನು ನಾನೇನು ಅರಿಯುವವಳೆ?"

"ಏನಾದರೊಂದು ಸ್ತುತಿಮಾಡಿದರಾಯಿತೇನು? ಮೆತ್ತಗಿರುವಳೆಂದು ಅವಳು ಗುಣವಂತೆಯೆಂಬಂತೆ ಅರಿಯದವರಿಗೆ ಕಾಣುವಳು. ಅವಳ ನೀಚತನವು ಹೊಟ್ಟೆಯಲ್ಲಿ ತುಂಬಿರುತ್ತದೆ. ಕೈಯಿಂದ ಒಂದು ಕೆಲಸವಾಗದಿದ್ದರೂ, ತಾನು ಬುದ್ಧಿವಂತಳೂ, ಕೆಲಸಗಾರ್ತಿಯೂ ಎಂಬ ಅಭಿಮಾನವು ಬಹಳವಿದೆ. ಮುದುಕೆಯಾಗುತ್ತ ಬಂದಳು, ಅಡಿಗೆ ಮಾಡಲಿಕ್ಕೆ ಬರುವದಿಲ್ಲ."

"ಅಯಥಾರ್ಥವಾದ ಮಾತುಗಳನ್ನು ಹೇಳಿ ನಿಮ್ಮ ದುರ್ಗುಣವನ್ನು ಮಂದಿಯ ನಿದರ್ಶನಕ್ಕೆ ತಂದುಕೊಡುವಿರಿ. ಅವಳು ಕೆಲಸವಂತಿಯೂ ಇರುವಳು; ಅಡಿಗೆಯನ್ನು ಮಾಡುವದರಲ್ಲಿ ಜಾಣಳೂ ಇರುವಳು. ದುರ್ಗಾಬಾಯಿ, ನಿಮಗೆ ಸಿಟ್ಟು ಬಂದರೂ ಚಿಂತೆಯಿಲ್ಲ. ಇದ್ದ ಮಾತನ್ನು ಇದ್ದಂತೆ ಆಡಲಿಕ್ಕೆ ನನಗೆ ಯಾರ ಅಂಜಿಕೆಯೂ ಇಲ್ಲ. ನೀವು ಮನೋರಮೆಯನ್ನು ಕಂಡರೆ ಉರಿಯನ್ನೇ ಕಾರುವಿರಿ. ಹುಲಿಯು ಎರಳೆಯನ್ನು ಕಂಡರೆ ಹೇಗೆ ಅದರ ಮೇಲೆ ಏರಿ ಹೋಗುವದೋ, ಅದರಂತೆ ನೀವು ಮನೋರಮೆಯನ್ನು ಕಂಡಾಕ್ಷಣಕ್ಕೆ ನಿರಪರಾಧಿನಿಯಿದ್ದರೂ ಅವಳನ್ನು ಬಡಿಯಲಿಕ್ಕೆ ಹರಿಹಾಯುತ್ತೀರಿ. ನಿಮ್ಮ ನಡತೆಯೇನೂ ಚಂದವಲ್ಲವ್ವಾ! ಸೊಸೆಯಂದಿರನ್ನೂ ಮಕ್ಕಳನ್ನೂ ಕಂಡು ಸಂತೋಷಬಡಬೇಕು."

ನಿಮ್ಮ ಮನೋರಮೆಯನ್ನು ಕಂಡು ನಮ್ಮಂಥ ಪರಕೀಯರು ಸಹ ಹಿರಿ ಹಿರಿ ಹಿಗ್ಗುತ್ತೇವೆ. ನೀವೇಕೆ ಹೀಗೆ ಮಾಡುವಿರೋ ಏನೋ!"

"ಸುಮ್ಮಸುಮ್ಮನೆ ನಾನು ಅವಳಿಗೆ ಸಿಟ್ಟು ಮಾಡುತ್ತಿರುವದಿಲ್ಲ. ಕ್ಷಣ ಕ್ಷಣಕ್ಕೆ ತಪ್ಪುಮಾಡುತ್ತಿದ್ದರೂ ಸಹಿಸಿಕೊಂಡು ಹೋಗುತ್ತೇನೆ. ಎಂದಾದ ರೊಮ್ಮೆ ಬುದ್ಧಿಯ ಮಾತು ಹೇಳಿದರೆ ಅದೇ ಘನವಾಗುತ್ತದೆ; ಅತ್ತೆಯು ತನ್ನನ್ನು ಸೇರುವದಿಲ್ಲೆಂದು ಗಂಡನ ಮುಂದೆ ಹೇಳಿದಳೆಂದೇ ತಿಳಿಯಬೇಕು. ಅತ್ತು ಕರೆದು ನೆರೆಹೊರೆಯ ಜನರ ಮುಂದೆಯೂ ಮನಸ್ಸಿಗೆ ಬಂದಂತೆ ದೂರಿಕೊಳ್ಳುತ್ತಾಳೆ. ನನಗೇನು ತಿಳಿಯುವದಿಲ್ಲೇನು? ನಮ್ಮ ಮಕ್ಕಳಿಗಾಗಿ ಸೊಸೆಯಂದಿರು ಬರು ತ್ತಾರೆ; ಇಲ್ಲದಿದ್ದರೆ ಎರಡನೆಯ ಹೆಣ್ಣುಮಕ್ಕಳು ನಮ್ಮ ಮನೆಗೆ ಏತಕ್ಕೆ ಬಂದಾರು?"

"ಬಾಯಿಯಿಂದ ಬ್ರಹ್ಮಜ್ಞಾನವನ್ನು ಹೇಳುವಿರಿ; ಅದನ್ನು ಕೃತಿಯಲ್ಲಿ ತಂದರೆ ನಿಮಗೆ ಭೂಷಣವಾಗುವದು. ಮನೆಯಲ್ಲಿ ಸೊಸೆಯಂದಿರು ಕಣ್ಣೀರ ತೆಗೆಯಬಾರದು. ಅವರು ಸಂತೋಷದಿಂದಿದ್ದರೆ ಮನೆಗೆ ಶಾಂತಿಯು. ಅವರು ತಳಮಳವೆಂದರೆ ವಂಶವೇ ಅಳಿದುಹೋಗುವದು."

"ಅಷ್ಟು ಇಷ್ಟು ಮಾತಿಗೆ ಅವಳು ಅತ್ತರೆ ನಾನೇನು ಮಾಡಲಿ? ಗಂಗಕ್ಕಾ, ಈ ಶೋಕಾವರ್ತ ಸೊಸೆಯ ಕರಿಗಾಲಿನಿಂದ ನಮಗೆ ಸುಖವಿಲ್ಲ ಕಂಡಿರಾ! ಇವಳು ಮನೆಯಲ್ಲಿ ಕಾಲಿಟ್ಟಳು; ಪತಿಯನ್ನು ಕಳೆದುಕೊಂಡೆನು; ಹುಲಿಯು ದಾರಿಯನ್ನು ಬಿಡುವ ಎರಡು ಸೀಮೆಯ ಎತ್ತುಗಳು ಕಟ್ಟಿದ ಕಣ್ಣಿಯಲ್ಲಿಯೇ ಬಿದ್ದು ಸತ್ತವು; ಪಂಚಕಲ್ಯಾಣಿ ಕುದುರೆಯನ್ನು ನೋಡಿದ್ದಿರಲ್ಲ? ನೋಡಿರಿ, ಅಂಥ ಕುದುರೆಯು ಕಾಳು ತಿನ್ನುತ್ತಿರುವಾಗಲೇ ನೆಲಕ್ಕೆ ಬಿದ್ದು ಸಾಯಬೇಕೇ? ಇವಳು ಬಂದು ಎರಡು ವರ್ಷಗಳಾದವು, ಇಷ್ಟರಲ್ಲಿ ನಮ್ಮ ಮನೆಯಲ್ಲಿ ಇಷ್ಟು ಅನರ್ಥಗಳು ಘಟಿಸಿರುವವು. 'ಕಾಲಗುಣ'ದಲ್ಲೇನಿದೆ? ಎಂದು ನಾನು ಮೊದಲು ಅನ್ನುತ್ತಿದ್ದೆನು; ಸೊಸೆಯಂದಿರು ಚಲೋ ಕಾಲಗುಣದವರಿದ್ದರೆ ತಿಪ್ಪೆಯು ಉಪ್ಪ ರಿಗೆಯಾಗುವದೆಂಬದೂ, ಕರಿಗಾಲ ಸೊಸೆಯರಿಂದ ಉಪ್ಪರಿಗೆಯು ತಿಪ್ಪೆಯಾಗುವ ದೆಂಬದೂ ನನ್ನ ಅನುಭವಕ್ಕೆ ಬಂದುಹೋಯಿತು. ಇನ್ನೂ ಏನೇನು ಹಾನಿಗ ಳೊದಗುತ್ತವೆಯೋ ಏನೋ! ಜನ್ಮವಿದ್ದರೆ ಅವುಗಳನ್ನೂ ಕಣ್ಣಿನಿಂದ ನೋಡಬೇಕಾಗಿ ವಂತೆ, ಅನೇಕ ಅನರ್ಥಗಳನ್ನು ನೋಡಲಾರದೆ 'ಒಮ್ಮೆ ಕಣ್ಣು ಮುಚ್ಚು ದೇವರೇ' ಎಂದು ಭಗವನ್ನಾಮಸ್ಮರಣೆ ಮಾಡುತ್ತೇನೆ."

ದುರ್ಗಾಬಾಯಿಯು ವಿಪರೀತಕಲ್ಪನೆಯನ್ನು ನೋಡಿ ಗಂಗಕ್ಕನಿಗೆ ಆಶ್ಚರ್ಯವಾಯಿತು; ಪರಕ್ಷಣದಲ್ಲಿ ಸಂತಾಪವೂ ಹುಟ್ಟಿತು. ಮನೋರಮೆಯು ಕರಿಗಾಲಿನವಳಿರುವಳೆಂಬ ಗ್ರಹಿಕೆಯಿಂದ ಅವಳನ್ನು ಕಂಡರೆ ಸೇರುವದಿಲ್ಲೆಂದು ತಿಳಿದು ಗಂಗಕ್ಕನು—

"ಕರಿಗಾಲಿನವರಿಂದ ಹಾನಿಯೊದಗುವದು ಸಹಜವು. ಅಂತೇ ಅವಳನ್ನು ಕಂಡರೆ ನೀವು ಸೇರುವದಿಲ್ಲ. ಅಂತರಂಗದ ಇಂಥ ಸಂಗತಿಗಳು ನನಗೇನು ಗೊತ್ತು? ನಾನಾಗಿದ್ದರೆ ಸಿಂತ ಕಾಲಿನ ಮೇಲೆ ಹೊರಗೆ ಹಾಕಿ ಮಗನಿಗೆ ಇನ್ನೊಂದು ಲಗ್ನ ಮಾಡುತ್ತಿದ್ದೆನು." ಎಂದು ಅವಳ ಮನಸ್ಸನ್ನು ಪರೀಕ್ಷಿಸುವದಕ್ಕೆ ಬುದ್ಧಿಪೂರ್ವಕವಾಗಿ ನುಡಿದಳು.

"ದೈವದಲ್ಲಿದ್ದದ್ದಾಯಿತೆಂದು ತಿಳಿದು ಅವಳ ಕಾಲಗುಣಕ್ಕೆ ನಾನೇನು ಅಷ್ಟು ಮಹತ್ವವನ್ನು ಕೊಟ್ಟಿರುವದಿಲ್ಲ ಹೂವಿಗಿಂತಲೂ ಮೆತ್ತಗೆ ಕಾಣುವ ಆ ಹೊಯ್ಮಾಲೆಯಲ್ಲಿ ಕರಳಲ್ಲಿ ಕತ್ತರಿಯನ್ನು ಆಡಿಸುವ ಗುಣವಿರುವದು. ನಾನು ಅನೇಕ ಗಂಡಹೆಂಡರನ್ನು ನೋಡಿದ್ದೇನೆ, ಇವರಂತೆ ಯಾರೂ ಇರಲಿಕ್ಕಿಲ್ಲ! ಯಾವಾಗಲೂ 'ಕುಚುಕುಚು' ಮಾತಾಡುತ್ತ ನನ್ನನ್ನು ಆಡಿಕೊಳ್ಳುವದರಲ್ಲಿಯೇ ಮಗ್ನರಾಗಿರುತ್ತಾರೆ; ನನ್ನನ್ನು ಕಂಡು 'ಪಿಸಿಪಿಸಿ' ನಗುತ್ತಾರೆ. ಕೆಲಸವನ್ನಂತೂ ಮನಸ್ಸುಗೊಟ್ಟು ಮಾಡುವದೇ ಇಲ್ಲ. ನಿಮ್ಮ ಗೋಪಾಲನೂ, ವನಿತೆಯೂ ಹೀಗೇ ಮಾಡುತ್ತಾರೇನಿರೇ? ಹುಡುಗರ ಮಾತೇನೆಂದು ಎಷ್ಟು ತಡಕೊಂಡು ಹೋದರೂ, ನನ್ನ ಪಾಲಿಗೆ ಅಪಕೀರ್ತಿಯು ಹೊರೆಯು ಬರುವಂತೆ ಬಂದೇಬರುತ್ತದೆ."

ದುರ್ಗಾಬಾಯಿಯು ಇಲ್ಲದ್ದೊಂದು ಹುಟ್ಟಿಸಿಕೊಂಡು ಆ ವಿನಯಶೀಲರಾದ ದಂಪತಿಗಳನ್ನು ದೂಷಿಸುವದು ಗಂಗಕ್ಕನಿಗೆ ಸರಿಬರಲಿಲ್ಲ. ಅವಳ ಕೆಲ ಕೃತಿಗಳನ್ನು ಹೇಳಿ ಇನ್ನೊಮ್ಮೆ ಹೀಗೆ ಮಾಡದೆ ಚಲೋ ರೀತಿಯಿಂದಿರಲಿಕ್ಕೆ ಹೇಳಿ ಮನೋರಮೆಯು ಗೋಳನ್ನು ಹಿಂಗಿಸಬೇಕೆಂದು ವಿಚಾರ ಮಾಡಿ—

"ದುರ್ಗಾಬಾಯಿ, ಏನಾದರೊಂದು ಹೇಳಲಿಕ್ಕೆ ಅವರೇನು ನನಗೆ ಅರಿಯದವರಲ್ಲ. ಮನೋಹರನ ಗುಣವು ಸಮುದ್ರದಂತಹದು. ಮನೋರಮೆಯು ಚಂದ್ರನಂತೆ ಶಾಂತಳೂ, ಗಂಗಾಜಲದಂತೆ ಪವಿತ್ರಳೂ ಭೂದೇವಿಯಂತೆ ತಾಳ್ಮೆಯುಳ್ಳವಳೂ ಇರುವಳು. ಅವರನ್ನು ದೂಷಿಸಿದರೆ ಮಹಾಪಾತಕವು ಬಂದೀತು. ಧರ್ಮರಾಯನಂಥ ಮಗನಿರುವದರಿಂದಲೇ, ಮನೋರಮೆಗೆ ನಿಮ್ಮಿಂದ ಮಾಡ

ಳ್ಪಡುವ ಯಾತನೆಗಳು ದಕ್ಕಿಹೋಗುತ್ತವೆ. ಆ ಮಹಾರಾಯಳಾದರೂ ನಿಮ್ಮ ಕೃತಿಗಳನ್ನೊಂದೂ ಪತಿಯ ಮುಂದೆ ಹೇಳುವದಿಲ್ಲ. ಎಂದಾದರೊಂದು ಸಂಗತಿಯು ದೃಷ್ಟಿಗೆ ಬಿದ್ದರೂ ಅವನು ಸಹಿಸಿಕೊಂಡು ಹೋಗುತ್ತಾನೆ. ಅಂತೇ ಒನಿಕೆ, ಊದುವ ಕೊಳವೆ, ಸವಟು, ಮುಗಿಚುವ ಕೈ, ಹಾರಿಯ ಕೋಲು, ಉರಿಯುವ ಕೊಳ್ಳಿ ಮೊದಲಾದ ಆಯುಧಗಳ ಪ್ರಹಾರವನ್ನು ಅವಳು ತಿನ್ನಬೇಕಾಗಿದೆ. ದುರ್ಗಾಬಾಯಿ, ನೀವು ಮನೋರಮೆಯನ್ನು ಪಶುವೆಂದು ತಿಳಿದಿರುವಿರೇನು ? ಪಶುಗಳು ಕೂಡ ಇಂಥ ಶಸ್ತ್ರಾಸ್ತ್ರಗಳ ಪೆಟ್ಟಿಗೆ 'ವಿಲಿವಿಲಿ' ಒದ್ದಾಡಿ ಜೀವ ಬಿಟ್ಟಾವು ! ಇಂಥ ರಾಕ್ಷಸ ಸ್ವಭಾವವೂ ಪೈಶಾಚವೃತ್ತಿಯೂ ಮನುಷ್ಯರಲ್ಲಿ ಇರಬಾರದು. ಎಲ್ಲಿಯಾದರೂ ಆ ಸಾಧುಭಾವದ ಹುಡುಗೆಯನ್ನು ಕೊಂದಿಟ್ಟೀರಿ !"

ಸಂತಪ್ತಳಾಗಿ ಗಂಗಕ್ಕನು ಹೀಗೆ ನುಡಿದ ಕೂಡಲೆ ದುರ್ಗಾಬಾಯಿಯಲ್ಲಿ ಕ್ರೋಧವು ಪ್ರಜ್ವಲಿಸಿತು. ಆವಳೇನು ಕಡಿಮೆಯವಳೆ ? ಗಂಗಕ್ಕನನ್ನು ಮೆಟ್ಟಿ ಹಾರುವಂಥ ಜಟ್ಟಿಯಾಗಿದ್ದಳು !

"ಅವಳು ಎಲ್ಲವನ್ನೂ ಊರಲ್ಲಿ ಡಂಗುರ ಹೊಡೆದಿರುವಳೆಂದ ಹಾಗಾಯಿತು. ನಮ್ಮ ಮನೆಯ ವಿಷಯಕ್ಕೆ ನೀವು ಬುದ್ಧಿಯ ಹೇಳುವ ಕಾರಣವಿಲ್ಲ. ನಮ್ಮ ಮನಸ್ಸಿಗೆ ಬಂದಂತೆ ನಾವು ಮಾಡುತ್ತೇವೆ. ಅದನ್ನು ಕೇಳಲಿಕ್ಕೆ ನೀವೆಷ್ಟರವರು ?" ಎಂದು ನುಡಿದು ದುರ್ಗಾಬಾಯಿಯು ಹೋಳಿಗೆಯ ಮಾಡುವದನ್ನು ಬಿಟ್ಟು—"ಎಲೇ ರಾವಿ, ಹೊಯ್ಮಾಲೀ ಬಾಯಿಲ್ಲಿ!" ಎಂದು ನುಡಿದ ಕೂಡಲೆ ಹೊರಗೆ ಮಾಲೆಯನ್ನು ಕಟ್ಟುತ್ತಿದ್ದ ಮನೋರಮೆಯು —"ಯಾಕೆ ಅತ್ಯಾ?" ಎಂದು ಎದುರಿಗೆ ಬಂದು ನಿಂತಳು.

"ಅಕೋ, ಆ ಜಾಂಗಟೆಯನ್ನು ತೆಗೆದುಕೊಂಡು 'ಅತ್ತೆಯು ನನ್ನನ್ನು ಒನಿಕೆ ಹಾರಿಗಳಿಂದ, ಕಂಬ-ತೊಲೆಗಳಿಂದ, ಒರಳುಕಲ್ಲು-ಬೀಸುವಕಲ್ಲಿನಿಂದ ಹೊಡೆಯುತ್ತಾಳೆಂ'ದು ಡಂಗುರವನ್ನು ಸಾರಿ ಬಾ, ಇದ್ದ ಕೆಲಸವನ್ನು ಬಿಟ್ಟು ಮೊದಲು ಈ ಕೆಲಸವನ್ನು ಮಾಡು. ಜಾಂಗಟೆಯನ್ನು ಬಡಿಯಲಿಕ್ಕೆ ಈ ಗುಣಿಸನ್ನು ತೆಗೆದುಕೋ." ಎಂದು ಲಟ್ಟಣಿಯನ್ನು ಒಳ್ಳೆಯ ಶಕ್ತಿಯಿಂದ ಅವಳ ತಲೆಗೆ ಗುರಿಯಿಟ್ಟು ಹೊಡೆದಳು! ದೈವಯೋಗವು ಒಳ್ಳೆಯದಿತ್ತು; ಸತ್ಯದೇವನ ಕರುಣಾಕಟಾಕ್ಷದಿಂದಲೂ, ಮನೋರಮೆಯ ಆಯುಷ್ಯವು ಗಟ್ಟಿಯಿದ್ದದರಿಂದಲೂ ಆ ನರಪಿಶಾಚಿಯ ಗುರಿಯು ಸ್ವಲ್ಪದರಲ್ಲಿ ತಪ್ಪಿತು. ಇಲ್ಲದಿದ್ದರೆ ಅವಳ ತಲೆಯು

ಕಲ್ಲಿಗಿಂತ ಜಡವಾದ ಸಿಸವೆಯು ಕಟ್ಟಿಗೆಯು ಹೊಡತಕ್ಕೆ ಛಿನ್ನವಿಚ್ಛಿನ್ನವಾಗಿ ಹೋಗುತ್ತಿತ್ತು! ಲಟ್ಟಣಿಯು ಅವಳ ತಲೆಗೆ ಹೊಂದಿಯೇ ಹೋಗಿ ಅವಳ ಹಿಂದೆ ಇದ್ದ ಗೋಡೆಗೆ ಬಡಿದು ಮೂರು ಹೋಳಾಯಿತು. ಗೋಡೆಯಲ್ಲಿ ಚೋಟುದ್ದ ತಗ್ಗು ಬಿತ್ತು!

ಈ ಅಸುರಕೃತಿಯನ್ನು ನೋಡಿ ಗಂಗಕ್ಕನು ಸಿಟ್ಟಿನಿಂದ ಹುಚ್ಚಾಗಿ ಹೋದಳು. ಸಪ್ಪಳವನ್ನು ಕೇಳಿ ಮನೋಹರನೂ, ಗೋಪಾಲನೂ, ವನಿತೆಯೂ ಒಳಗೆ ಬಂದರು.

"ಮುದೋಡೀ, ಕೂಸನ್ನು ಕೊಂದು ಬಿಟ್ಟಿದ್ದೆಯಲ್ಲ!" ಎಂದು ಗಂಗಕ್ಕನು ಗಾಬರಿಯಿಂದ ನುಡಿದಳು.

ಏಟು ತಪ್ಪಿದ್ದಕ್ಕೆ ದುರ್ಗಾಬಾಯಿಯು ಕಕ್ಕಸದಿಂದ ಕೈಯನ್ನು ನೆಲಕ್ಕೆ ಅಪ್ಪಳಿಸಿ—"ನನ್ನ ಕೈಯೊಳಗಿಂದ ಉಳಿದುಕೊಂಡೆ!" ಎಂದು ಉದ್ಗಾರ ತೆಗೆದಳು.

"ಈಗೇನಾಯಿತು ಕೊಂದುಬಿಡು!" ಎಂದು ಅವಳ ಕೈಯಲ್ಲಿ ಹಾರಿಯನ್ನು ಕೊಟ್ಟು ಗಂಗಕ್ಕನು—"ನಿನ್ನ ಮನಸ್ಸನ್ನು ತೃಪ್ತಿಮಾಡಿಕೊ!" ಎಂದು ನುಡಿದಳು.

ಹಾರಿಯನ್ನು ನೆಲಕ್ಕೆ ಒಗೆದು ದುರ್ಗಾಬಾಯಿಯು—"ನೀವೆಲ್ಲರೂ ಒಂದೇ ವರ್ಗದವರು. ಆ ಶಟವಿಗೆ ಬೋಧಿಸಿ ಉದ್ದಾಮಳನ್ನು ಮಾಡಿರುವಿರಿ." ಎಂದು ನುಡಿದ ಕೂಡಲೆ ಗಂಗಕ್ಕನು ಅವಳನ್ನು ಬಾಯಿಗೆ ಬಂದಂತೆ ನಿಂದಿಸಿದಳು. ಈ ರಾಕ್ಷಸಕೃತ್ಯವನ್ನು ನೋಡಿ ಗೋಪಾಲನೂ, ಮನೋಹರನೂ, ವನಿತೆಯೂ ಅವಳ ಸಮಾಚಾರವನ್ನು ಚೆನ್ನಾಗಿ ತೆಗೆದುಕೊಂಡರು. ಮನೋರಮೆಯು ಒಂದು ಕಡೆಯಲ್ಲಿ ರೋದಿಸುತ್ತ ನಿಂತಿದ್ದಳು.

"ನಿಮ್ಮಪ್ಪ ಸತ್ತ ಸುದ್ದಿಯು ಬಂದಿದೆ ಏನೇ ಅಳಲಿಕ್ಕೆ? ಹೊಡೆಯದೆ ಇಷ್ಟು ರಂಬಾಟ ಮಾಡುವಿ! ಪೆಟ್ಟು ಬಿದ್ದಿದ್ದರೆ ಎಷ್ಟು ಗೋಳಾಡುತ್ತಿದ್ದೆಯೋ ಏನೋ!" ಎಂದು ಕರ್ಕಶ ಧ್ವನಿಯಿಂದ ದುರ್ಗಾಬಾಯಿಯು ನುಡಿದಳು.

"ಪೆಟ್ಟು ಬಿದ್ದ ಮೇಲೆ ಜೀವದಿಂದ ಉಳಿದಿದ್ದರೆ ಗೋಳಾಡಬೇಕಷ್ಟೆ!" ಎಂದು ಮನೋಹರನು ನುಡಿದು ನಿಟ್ಟುಸಿರುಬಿಟ್ಟನು.

ಸತ್ಯನಾರಾಯಣನ ಪೂಜೆಯಾಯಿತು; ಕಥೆಯಾಯಿತು; ಪ್ರಸಾದ ಭಕ್ಷಣವಾಯಿತು. ಎಲ್ಲರೂ ಊಟಕ್ಕೆ ಕುಳಿತರು. ದುರ್ಗಾಬಾಯಿಯನ್ನು ಸಂತೈಸಿ ಎರಡು ತುತ್ತು ಉಣ್ಣಿಸಬೇಕಾದರೆ ಎಲ್ಲರಿಗೂ ಸಾಕುಬೇಕಾಗಿ ಹೋಯಿತು!

# ನಾಲ್ಕನೆಯ ಜ್ವಾಲೆ

ದುರ್ಗಾಬಾಯಿಯ ಅಸುರಕೃತಿಗಳನ್ನು ನೋಡಿ ಮನೋಹರನು ಕ್ರುದ್ಧನಾಗಿದ್ದನು. ತಾಯಿಯ ಮನಸ್ಸಿನ ವಿರುದ್ಧವಾಗಿ ವರ್ತಿಸಿ ಅವಳಿಗೆ ದುಃಖವನ್ನು ಕೊಡಬಾರದೆಂಬ ಬುದ್ಧಿಯು ಅವನಲ್ಲಿ ಇಲ್ಲದಾಗಿತ್ತು. ಅವಳ ದುಷ್ಕೃತಿಗಳಿಗೆ ಎಡೆಗೊಡುತ್ತ ಹೋದರೆ ಅನಾಹುತವಾಗಧಿರದೆಂದು ಅವನು ನಿಶ್ಚಯವಾಗಿ ತಿಳಿದನು. ಸಾಮೋಪಾಯಗಳಿಂದ ಅವಳು ಮಾರ್ಗಕ್ಕೆ ಬಾರದಿದ್ದರೆ ಯೋಗ್ಯವಾದ ದಂಡೋಪಾಯವನ್ನು ಕೈಕೊಳ್ಳಬೇಕೆಂದು ನಿಶ್ಚಯಿಸಿ ತಾಯಿಯ ಬಳಿಗೆ ಬಂದು— “ಅವ್ವಾ, ನೀನು ನಿರ್ದಯಳಿರುವೆ. ಅತ್ಯಂತ ವಿನಯಶಾಲಿನಿಯೂ, ಸದ್ಧರ್ಮಿಣಿಯೂ ಸದ್ಗುಣಿಯೂ, ಸದಾಚಾರಿಣಿಯೂ ಆದ ಆ ಅಬಲೆಗೆ ಅವ್ಯಾಹತವಾಗಿ ಉಪದ್ರವ ಕೊಡುತ್ತಿರುವೆ; ಪಶುಗಳಿಗೆ ಕೂಡ ವಿಧಿಸದಂಥ ದಂಡನೆಯನ್ನು ವಿಧಿಸುತ್ತಿರುವೆ. ಹೆಂಡತಿಯನ್ನು ಮೇಲುಗಟ್ಟಿ ಬರುವನೆಂಬ ದೋಷಕ್ಕೆ ಅಂಜಿ, ನಾನು ಇಷ್ಟು ದಿವಸ ಸುಮ್ಮನಿದ್ದೆನು. ಈಗೀಗಂತು ನಿನ್ನ ಪೈಶಾಚವೃತ್ತಿಯು ಅತಿರೇಕವಾದುದರಿಂದ ನಿನ್ನನ್ನು ಕೇಳಬೇಕಾಯಿತು. ಅವಳು ಅಂಥ ಅಪರಾಧವನ್ನೇನು ಮಾಡಿರುವಳು ? ಅವಳನ್ನು ಕಂಡರೆ ನಿನಗೆ ಹೇಗಾಗುವದು ? ನಿನ್ನ ಆಚರಣೆಯಲ್ಲಿ ಇನ್ನು ಮೇಲಾದರೂ ಸುಧಾರಣೆಯನ್ನು ಮಾಡಿಕೊಳ್ಳುವಂತಿದ್ದರೆ ಹೇಳು. ಇಲ್ಲದಿದ್ದರೆ ಯಾವದೊಂದು ಉಪಾಯವನ್ನು ಯೋಜಿಸಬೇಕಾಗುವದು.” ಎಂದು ಸಮಾಧಾನದಿಂದ ಮನೋಹರನು ನುಡಿದನು.

ಮಗನ ಮಾತುಗಳನ್ನು ಕೇಳಿ ದುರ್ಗಾಬಾಯಿಯು ನಖ-ಶಿಖಾಂತವಾಗಿ ಉರಿಯಹತ್ತಿದಳು. ಹೆಸರಿಗೆ ಸರಿಯಾಗಿ ಅವತಾರವನ್ನು ತಾಳಿ ಅವನನ್ನು ಮುರಿದು ಹಾಕುವಳೋ, ಸೀಳಿ ಒಗೆಯುವಳೋ, ಹಿಂಡಿ ಹಿಪ್ಪೆಮಾಡುವಳೋ, ಗಂಟಲವನ್ನು ಕಡಿದು ರಕ್ತಪಾನಮಾಡುವಳೋ ಎನ್ನುವಂತೆ ಅವಳು ಅದ್ಭುತವಾಗಿ ಕಂಡಳು.

“ಎಲಾ, ಹೆಂಗೆಳೆಯ ಗುಲಾಮಾ ! ನೀನು ಮೈಮೇಲೆ ಬಂದಿರುವೆಯಲ್ಲವೇ ಮುದುಕಿಯಾದ ಇವಳಿಂದ ಏನಾದೀತೆಂದು ತಿಳಿದಿರುವೆಯೇನು ? ಅರೆಕ್ಷಣದಲ್ಲಿ ಘಾತಕಿಗಳಾದ ನಿಮ್ಮಿಬ್ಬರ ಜೀವವನ್ನು ಹಿಂಡಿಬಿಟ್ಟೇನು ! ಆ ವಿಷಮೆಯ ಪಕ್ಷವನ್ನು ವಹಿಸಿ ನನಗೆ ಬುದ್ಧಿಗಲಿಸುವದಕ್ಕೆ ಪ್ರಾರಂಭಿಸಿದೆಯಲ್ಲವೆ ! ಈ ದುರ್ಗೆಯ ಸಾಮರ್ಥ್ಯವನ್ನೊಮ್ಮೆ ಪರೀಕ್ಷಿಸುವೆಯೇನು ? ಒಂದೇ ಗುದ್ದಿಗೆ ನೆತ್ತಿಯಿಂದ ಜೀವಬಿಟ್ಟೇ !” ರಕ್ಕಸಿಯಾದ ದುರ್ಗಾಬಾಯಿಯ ಕಕ್ಕಸದ ಮಾತುಗ

ಳಿಗೆ ಸೊಪ್ಪುಹಾಕದೆ ಮನೋಹರನು– "ನಮ್ಮಿರ್ವರನ್ನು ಕೊಂದು ನೀನೇ ಇನ್ನು ಕೊಂಡು ಸಾಮ್ರಾಜ್ಯಪದವನ್ನನುಭವಿಸು ! ನಮ್ಮ ಪ್ರಾಣಗಳನ್ನು ಹೀರಿ ಬ್ರಹ್ಮರಾಕ್ಷಸಿಯಾಗಿ ನೀನು ಚಿರಂಜೀವಿನಿಯಾಗಿ ಬಾಳು ! ಅವ್ವಾ, ನೀನು ಸ್ತ್ರೀಯರ ಕಾರ್ಯಕ್ಷೇತ್ರವನ್ನು ಮೀರಿ ನಡೆಯ ತೊಡಗಿರುವೆ ! ಕೀರ್ತಿ-ಅಪಕೀರ್ತಿಗಳ ಪರಿವೆಯು ನಿನಗೆ ಇರುವದಿಲ್ಲ; ಜನರು ನೊಂದಾರು ಬೆಂದಾರೆಂಬ ಕನಿಕರವು ತಿಲಾಂಶವಾದರೂ ಉಳಿದಿಲ್ಲ. ಅಷ್ಟಿಷ್ಟುಮಾತಿಗೆ ರೌದ್ರಾವತಾರವನ್ನೇ ತೋರಿಸುವೆ. ನಿನ್ನ ಮನಸ್ಸಿನಲ್ಲಿದ್ದದ್ದನ್ನು ಒಮ್ಮೆ ತೀರಿಸಿಕೊಂಡು ಬಿಡು. ಮೇಲಿಂದ ಮೇಲೆ ನಿನ್ನ ಪೀಡೆಯನ್ನು ಸಹಿಸೆನು."

ಮಗನ ಮಾತಿನಿಂದ ದುರ್ಗಾಬಾಯಿಯು ತುಸು ಮೆತ್ತಗಾದಳು. ತನ್ನೊಡನೆ ಎಂದೂ ಬಾಯಿಗೆ ಹತ್ತದವನು ಇಂದು ಇಷ್ಟು ಮಾತಾಡುವದನ್ನು ನೋಡಿ ಅವಳಿಗೆ ಬಹಳೇ ಸೋಜಿಗವಾಯಿತು. ಗಂಗಕ್ಕನ ಹಾಗು ಗೋಪಾಲನ ಬೋಧವು ಆಗಿರುವದೆಂದು ತಿಳಿದಳು.

"ಮಗೂ, ನಾನು ಎಂದಾದರೂ ನಿನಗೆ ಪೀಡೆ ಕೊಟ್ಟಿರುವೆನೇನು ?"

"ಅವಳನ್ನು ನಿಷ್ಕಾರಣವಾಗಿ ನೋಯಿಸಹತ್ತಿದರೆ ನನಗೆ ದುಃಖವಾಗುವದಿಲ್ಲವೇನು ? ನಿನ್ನಲ್ಲಿ ಅಂತಃಕರಣದ ಜಲವು ಬತ್ತಿಹೋಗಿರುವದೆಂದು ಎಲ್ಲರೂ ಕಲ್ಲೆದೆಯವರೆಂದು ಭಾವಿಸುವೆಯಲ್ಲವೇ ?"

"ಕಂಡಕಂಡವರೆದುರಿನಲ್ಲಿ ರಮೆಯು ನನ್ನನ್ನು ನಿಂದಿಸುವದು ಯೋಗ್ಯವೇ? ನಾನು ಅವಳ ಅಪರಾಧವನ್ನು ಎಷ್ಟೆಂದು ಸಹಿಸಲಿ ? ಸಿಟ್ಟಿನ ಭರದಲ್ಲಿ ಏನಾದರೊಂದು ಅನುಚಿತವಾಗಿದ್ದರೆ ಅದನ್ನೇ ದೊಡ್ಡದುಮಾಡಿ ನೀನು ಹೀಗೆ ಮಾತಾಡಿದರೆ ಏನು ಮಾಡಲಿ ?" ಎಂದು ದುರ್ಗಾಬಾಯಿಯು ಮತ್ತಿಷ್ಟು ಮೆತ್ತಗಾಗಿ ನುಡಿದಳು.

ತಾಯಿಯು ಮಾರ್ದವವನ್ನು ತಳೆದದ್ದರಿಂದ ಮನೋಹರನ ಅಳವು ಹೆಚ್ಚಾಯಿತು. ಇದೇ ಹೊತ್ತಿನಲ್ಲಿ ಅವನನ್ನು 'ತ್ರಾಹಿ ತ್ರಾಹಿ' ಅನ್ನಿಸಿಬಿಡಬೇಕೆಂದು ಮನೋಹರನು ಆಲೋಚನೆ ಮಾಡಿ—

"ಸುಳ್ಳೇ ಬಡಬಡಿಸುತ್ತೀ, ಅವಳ ತಪ್ಪುಗಳಲ್ಲಿ ಒಂದನ್ನಾದರೂ ಹೇಳು. ಅವಳು ಅಪರಾಧಿನಿಯೆಂಬದನ್ನು ಸಿದ್ಧಮಾಡಿಕೊಟ್ಟರೆ, ನೀನು ಹೇಳಿದಂಥ ಶಿಕ್ಷೆಯನ್ನು ವಿಧಿಸುವೆನು. ಸೇರಲಾರದ್ದಕ್ಕೆ ಕಲ್ಪಿಸಿಕೊಂಡು ಏನಾದರೊಂದು ಹೇಳಿದರಾಯಿತೇನು ? ಇನ್ನು ಮೇಲೆ ಚಲೋ ರೀತಿಯಿಂದಿರುವಂತಿದ್ದರೆ ಈ ಮನೆಯಲ್ಲಿರು. ನಿನ್ನ ಕಾಯಕವನ್ನೇ ನೀನು ನಡಿಸುವೆಯೆಂದು ನನ್ನ ನಿದರ್ಶನಕ್ಕೆ ಬಂದರೆ, ನಿಂತಕಾಲಮೇಲೆ ಮನೆಬಿಟ್ಟು ಹೊರಗೆ ಹೋಗಬೇಕಾದೀತು !

ಮೆತ್ತಗೆ ಇರುವರೆಂದು ಹೆದರಿಸಿಕೊಂಡು ಹೆಮ್ಮೆಯಿಂದ ನಡೆಯುವ ದಿವಸಗಳು ಇಂದಿಗೆ ಪೂರ್ಣವಾದವೆಂದು ತಿಳಿದುಕೊಂಡು ವರ್ತಿಸೆಂದರಾಯಿತು." ಎಂದು ನಿರ್ದಾಕ್ಷಿಣ್ಯದಿಂದ ಮನೋಹರನು ನುಡಿದನು. ಅವನ ಮಾತುಗಳನ್ನು ಕೇಳಿದ ಕೂಡಲೆ ದುರ್ಗಾಬಾಯಿಯು ಜರ್ರನೆ ಇಳಿದಳು. ಪ್ರಜೆಗಳಿಗೆ ಅನೇಕಯಾತನೆಗಳನ್ನು ಕೊಡುತ್ತ, ತಾನೇ ಇಂದ್ರ, ತಾನೇ ಚಂದ್ರನೆಂದು ಅಹಂಕಾರದಲ್ಲಿ ಮುಳುಗಿದ ಸಾಮ್ರಾಜ್ಯಾಧಿಕಾರಿಯು ಪದಚ್ಯುತನಾದರೆ ಅವನಿಗುಂಟಾಗುವ ದುಃಖಕ್ಕಿಂತಲೂ, ಹೆಚ್ಚಿಗೆ ಸಂಕಟವು ದುರ್ಗಾಬಾಯಿಗೆ ಬಂದೊದಗಿತು. ಅವನ ನಿಷ್ಠುರವಾದ ಮಾತುಗಳಿಂದ ಹಣ್ಣುಗಾಯ ನೀರುಗಾಯಿಯಾದ ಅವಳು ಕಣ್ಣೀರುದಿರಿಸುತ್ತ—

"ರಮೆಯು ನಿನಗೆ ಮಾಟ-ಮರುಳನ್ನು ಮಾಡಿಸಿದಂತೆ ಕಾಣುವದು. ಹಾಗಿಲ್ಲದಿದ್ದರೆ ಸುಜನನಾದ ನಿನ್ನ ಬಾಯಿಯಿಂದ ಇಂಥ ಕರ್ಕಶವಾದ ಮಾತುಗಳು ಹೇಗೆ ಬಂದಾವು?" ಕಣ್ಣತುಂಬ ನೀರ ತಂದು ದುರ್ಗಾಬಾಯಿಯು ಅಂದಳು. "ನಿನ್ನ ದುಷ್ಟ ಮನಸ್ಸೇ ನನಗೆ ಮಾಟಮಾಡಿಸಿದೆ. ನಿನ್ನ ಮನಸ್ಸಿನ ವಿರುದ್ಧವಾಗಿ ನಾನು ಮಾತನಾಡಹತ್ತಿದೆನೆಂದು ನಿನಗೆ ಹೇಗೆ ವೇದನೆಯಾಗುವದೋ, ಅದರಂತೆ ಜನರಾದರೂ ನಿನ್ನ ರಾಕ್ಷಸವರ್ತನದಿಂದ ನೊಂದುಕೊಳ್ಳುವರೆಂಬ ಕಲ್ಪನೆಯು ನಿನ್ನಲ್ಲಿ ಹುಟ್ಟುವದಿಲ್ಲವೇನು? ವೃಥಾವಾದವು ನಿಷ್ಪ್ರಯೋಜಕವು. ಇನ್ನು ಮೇಲಾದರೂ ಅಂತಃಕರಣಪೂರ್ವಕವಾಗಿದ್ದು ನಮಗೆ ಸಂತೋಷವನ್ನುಂಟುಮಾಡು. ಮನೋರಮೆಯು ಕಟ್ಟಿಗೆಯು ಅಥವಾ ಕಲ್ಲಿನ ಒಂದು ಪ್ರತಿಮೆಯೆಂದು ತಿಳಿಯದೆ, ನಿನ್ನಂತೆ ಅವಳಲ್ಲಿಯೂ ಜೀವನವಿರುತ್ತದೆಂದು ಅವಳನ್ನು ಪ್ರೀತಿಸು. ನಿನ್ನಿಂದ ಅನುಚಿತವು ಘಟಿಸಿದರೆ ಈ ಮನೆಯು ಎರವಾಗುವದೆಂಬದನ್ನು ಮಾತ್ರ ಪೂರ್ಣವಾಗಿ ಸ್ಮರಣೆಯಲ್ಲಿರಿಸು."

ಮಗನ ಮಾತುಗಳನ್ನು ಕೇಳಿ ದುರ್ಗಾಬಾಯಿಗೆ ದೊಡ್ಡ ಆಲೋಚನೆಯೇ ಹುಟ್ಟಿತು. ಕೆಲವು ಹೊತ್ತಿನವರೆಗೆ ಅವಳು ಏನೇನೋ ವಿಚಾರಿಸುತ್ತ ಸ್ವಸ್ಥವಾಗಿ ಕುಳಿತಳು. ಪ್ರೇತಕಳೆಯು ಬಂದಿದ್ದ ಅವಳ ಮುಖದಲ್ಲಿ ಒಮ್ಮಿಂದೊಮ್ಮೆ ಆನಂದದ ಲಕ್ಷಣವು ತೋರಹತ್ತಿತು. ಒಮ್ಮಿಂದೊಮ್ಮೆ ಅವಳ ಮುಖಚರ್ಯೆಯಲ್ಲಿ ಅಭ್ಯಂತರವಾದ ಕಾರಣವು ಅವಳ ಅಂತರಾತ್ಮನಿಗಲ್ಲದೆ ಎರಡನೆಯವರಿಗೆ ಗೊತ್ತಾಗುವ ಬಗೆ ಏನು?

"ಮನೂ, ಮನೋರಮೆಯು ನನಗೆ ಜ್ವಾಲಾಮುಖಿಯೆಂದು ಹೆಸರಿಟ್ಟಿರುವಳಂತೆ! ಎಷ್ಟೋ ಜನರು ಹಿಂದೆ ಮುಂದೆ ಈ ಹೆಸರನ್ನೇ ಉಪಯೋಗಿಸುತ್ತಿರುವರು. ಇದು ನಿನಗೆ ಯೋಗ್ಯವಾಗಿ ಕಾಣುವದೇನು?"

" ಇದು ಮನೋರಮೆಯ ಕೃತಿಯಲ್ಲ. ನೀನು ಯಾವಾಗಲೂ ಉರಿಮೋರೆಯಿಂದಿರುವೆ; ಅವಳನ್ನು ಕಂಡರೆ ಬೆಂಕಿಯನ್ನೇ ಕಾರುತ್ತಿರುವೆ. ನಿನ್ನ ಸ್ವಭಾವವು ಮುಖದಿಂದಲೇ ತಿಳಿಯುವದು. ಅಂತೇ ಜನರು ಅನ್ವರ್ಥಕವಾದ ಹೆಸರನ್ನಿಟ್ಟಿರುವರು. ಇನ್ನು ಶಾಂತಮುಖಿಯಾಗಿ ಮೊದಲಿನ ಹೆಸರನ್ನು ಮರೆಯಿಸು." ಎಂದು ಮನೋಹರನು ನಗುತ್ತ ನುಡಿದನು.

ಸೊಸೆಯಂದಿರನ್ನು ಪಶುಗಳಿಗಿಂತ ಕಡೆಯೆಂದು ತಿಳಿದುಕೊಂಡು ಅವರ ಮೇಲೆ ಅವ್ಯಾಚಶಬ್ದಗಳ ಮಳೆಗರೆಯುವ ಹಾಗು ತಮ್ಮ ಅಧಿಕಾರದ ಒಳಗಿರುವವರನ್ನು ತಾವೇ ಶಿಕ್ಷಿಸುತ್ತ, ಅಧಿಕಾರಕ್ಕೆ ಮೀರಿದ ಪ್ರಕರಣಗಳನ್ನು ಅವರವರ ಪತಿರಾಜರ ವಶಕ್ಕೆ ತಮ್ಮ ಅಭಿಪ್ರಾಯ ಸಹಿತವಾಗಿ ಕೊಟ್ಟು ಅವರಿಗೆ ದಂಡನೆಯನ್ನು ಮಾಡಿಸುತ್ತ ರಾಕ್ಷಸವೃತ್ತಿಯಿಂದಾಚರಿಸುವ ಅತ್ತೆಯಂದಿರಿಗೆ " **ಜ್ವಾಲಾಮುಖಿ** "ಯೆಂಬ ಅಭಿಧಾನವನ್ನು ಕೊಟ್ಟಿರುವೆವೆಂದು ಚಂದ್ರಪುರದ ದೈವದವರು ಪ್ರಸಿದ್ಧಪತ್ರಿಕೆಗಳನ್ನು ದೇಶದಲ್ಲೆಲ್ಲ ಹಂಚಿದರು।

---

## ಐದನೆಯ ಜ್ವಾಲೆ



ಮನೋಹರನು ನಿಷ್ಠುರರೀತಿಯಿಂದ ವರ್ತಿಸಿ ತಾಯಿಯನ್ನು ಹಾದಿಗೆ ತಂದನಷ್ಟೇ ? ಅವಳು ಈಗ ಎಲ್ಲರಿಗೂ ಬೆಲ್ಲದ ಹೇರಾಗಿದ್ದಳು. ಮನೋಹರನ ಜಯಸಂಪಾದನೆಗೆ ಗಂಗಕ್ಕನೂ, ಗೋಪಾಳರಾಯನೂ ಶ್ರೇಯೋಭಾಗಿಗಳಾಗಿದ್ದರು. ಅವರು ಅವನಿಗೆ ಒಳಿತಾಗಿ ಬೋಧಿಸಿ ಭಟನನ್ನು ಮಾಡಿದ್ದರು. ಇಲ್ಲದಿದ್ದರೆ ಅಷ್ಟುದ್ದ ನೀರಿನಲ್ಲಿ ಹೋಗುವದು ಮನೋಹರನ ಯೋಗ್ಯತೆಯೋ ಅಲ್ಲ.

ಮನೋಹರನು ಗೋಪಾಳರಾಯನ ಮನೆಗೆ ಬಂದಿದ್ದನು. ಅವನು ತನ್ನ ವಿಜಯದುಂದುಭಿಯನ್ನು ಮೊಳಗಿಸಹತ್ತಿದನು.

" ತಾಯಿಯನ್ನು ಮೆತ್ತಗೆ ಮಾಡುವ ಮಂತ್ರವು ಸಾಧಿಸಿತೆಂದು ಅದರ ದುರುಪಯೋಗವನ್ನು ಮಾಡಿಕೊಳ್ಳಬೇಡ. ಮನೂ, ಹಡೆದವರಿಗೆ ದುಃಖ ಕೊಡುವದು ಸುಪುತ್ರನೆಂದೆನ್ನಿಸಿಕೊಳ್ಳುವ ನಿನ್ನ ಕರ್ತವ್ಯವಲ್ಲ. " ಎಂದು ಗಂಗಕ್ಕನು ಮನೋಹರನಿಗೆ ಹೇಳಿದಳು. " ಗಂಗಕ್ಕಾ, ನನ್ನನ್ನು ಮೂರ್ಖರಲ್ಲಿ ಗಣಿಸಿದಿರೇನು ? ಕಾಲಕ್ಕೆ ತಕ್ಕ ಉಪಾಯವನ್ನು ನೀವಾಗಿ ಹೇಳಿದಿರೆಂದು ನಾನು ಅದರಂತೆ ಮಾಡಿದೆನು. "

" ಅಂತೇ ಅವರು ಹಾದಿಗೆ ಬಂದರು. " ಎಂದು ಗೋಪಾಲರಾಯನು ನಗುತ್ತ ಮಾತಾಡಿದನು.

" ಹಾಗೇ ಸುಮ್ಮನೆ ಬಿಟ್ಟಿದ್ದರೆ, ಹೂವಿನಂತೆ ಕೋಮಲೆಯಾದ ಮನೋರಮೆಯು ಆತ್ಮಘಾತವನ್ನು ಮಾಡಿಕೊಳ್ಳದೆ ಇರುತ್ತಿದ್ದಿಲ್ಲ. ದೇವರು ಕಲ್ಯಾಣ ಮಾಡಿದನು. ಆತನೇ ದುರ್ಗಾಬಾಯಿಯ ಹೃದಯವನ್ನು ಪ್ರವೇಶಿಸಿ ಅವಳಲ್ಲಿ ದಯವನ್ನು ಹುಟ್ಟಿಸಿದನೆನ್ನಬೇಕು. " ಎಂದು ಗಂಗಕ್ಕನು ನುಡಿದಳು.

" ವನಿತಾ, ಏನು ನಡೆದಿದೆ ? " ಎಂದು ಮನೋರಮೆಯು ಬಂದಳು. ಪತಿಯು ಇದ್ದದ್ದನ್ನು ನೋಡಿ ಅವಳು ಕೋಣೆಯಲ್ಲಿ ಹೋದಳು. ಆಗ ಗಂಗಕ್ಕನು– " ನಿನಗೆ ಮಂದಿ–ಮಾನವರು ಬೇಡವೇನೇ ? ಒಬ್ಬಳೇ ಕೋಣೆಯನ್ನು ಹೊಕ್ಕಿ ! " " ಗಂಡನಿಗೆ ಎಷ್ಟೊಂದು ನಾಚುತ್ತಾಳೆ ! " ಎಂದು ವನಿತೆಯು ಅವಳ ಕೈಯನ್ನು ಹಿಡಿದು ಹೊರಗೆ ಕರೆತಂದಳು. ಗಂಗಕ್ಕನು ಅವಳನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು–" ಅಲ್ಲೇ, ಗಂಡನೆದುರಿಗೆ ಕುಳಿತುಕೊಳ್ಳಲಿಕ್ಕೆ ನಾಚುವಂಥ ಸಾಧುಗುಣವಿದ್ದ ಮೇಲೆ, ದುಷ್ಟ ಅತ್ತೆಯಂದಿರು ಬೆನ್ನ ಮೇಲೆ ಒನಿಕೆಯ ಪೆಟ್ಟು ಹಾಕುವದನ್ನು ಬಿಟ್ಟಾರೇನೇ ? ಅತ್ತೆಯ ಕೃತಿಗಳನ್ನು ಮುಚ್ಚಿಕೊಂಡು ಮುಚ್ಚಿಕೊಂಡು, ಇಷ್ಟು ದಿನ ಕಷ್ಟವನ್ನನುಭವಿಸಿದೆ. ಅಬಲೆಯರಾದ ನೀವು ಅತ್ತೆನಾದಂದಿರ ಅನ್ಯಾಯವನ್ನು ನಿಮ್ಮ ಪತಿಗಳ ಮುಂದೆಯೂ, ಹಿತಚಿಂತಕರ ಮುಂದೆಯೂ ಹೇಳಿ ಅವುಗಳ ಪರಿಮಾರ್ಜನಕ್ಕೆ ಯತ್ನಪಡಬೇಕು. ಶಕ್ಯವಿದ್ದವುಗಳನ್ನು ನೀವೇ ದೂರಮಾಡಲು ಸಾಹಸಪಡಬೇಕು. ಆದರೆ ನೀವು ಮಾತ್ರ ಸದ್ವೃತ್ತಿಯಿಂದ ಇರುವದನ್ನು ಮರೆಯಬಾರದು. " ಎಂದು ನುಡಿದು– " ಈಗ ಅತ್ತೆಯು ಹೇಳಿದಂತೆ ಕೇಳುವಳೆಂದು ಮುಯ್ಯವನ್ನು ತೀರಿಸುವ ಸಾಹಸಕ್ಕೆ ಹೋದರೆ, ಮನೂನ ಕೈಯಲ್ಲಿ ಬಡಿಗೆಯನ್ನು ಕೊಟ್ಟೇನು! " ಗಂಗಕ್ಕನು ನಗುತ್ತ ನುಡಿದಳು.

" ಏತಕ್ಕೆ! " ಎಂದು ನುಡಿದು ಮನೋರಮೆಯು ನಗಹತ್ತಿದಳು.

" ಅತ್ತೆಯು ಶಸ್ತ್ರವನ್ನು ಕೆಳಗಿಟ್ಟಿರುವದರಿಂದ ನಿನ್ನ ಮೈಯು 'ಭಣ-ಭಣ' ಅನ್ನುತ್ತಿರಬಹುದು. ಇಕೋ, ಇದನ್ನು ತೆಗೆದುಕೊಂಡು ಪತಿಯ ಕೈಯಲ್ಲಿ ಕೊಟ್ಟು ನೋಡು, ಏತಕ್ಕೆನ್ನುವ ಅನುಭವವು ಬರುವದು. " ಬಡಿಗೆಯನ್ನು ತೋರಿಸಿ ನಗುತ್ತ ಗಂಗಕ್ಕನು ನುಡಿವ ಕೂಡಲೆ ಎಲ್ಲರೂ ಖೊಳ್ಳನೆ ನಕ್ಕರು. ಅಷ್ಟರಲ್ಲಿ ದುರ್ಗಾಬಾಯಿಯು ಬಂದು–" ರಮಾ, ಯಾವಾಗ ಮುಂಜಾನೆ ಊಟ

ಮಾಡಿರುವೆ! ಇನ್ನೂ ನಿನಗೆ ಹಸಿವೆಯೇ ಆಗಿಲ್ಲವೇ? ವನಿತೆಯೊಡನೆ ಹರಟೆಯನ್ನು ಹೊಡೆಯುಹತ್ತಿದರೆ ನಿನಗೆ ಹೊಟ್ಟೆಯ ಪರಿವೆಯೇ ಇರುವದಿಲ್ಲ. ವನಿತಾ, ನೀನೂ ಹೋಗು. ಫಲಾಹಾರವನ್ನು ಮಾಡಿಟ್ಟಿರುವೆನು; ಮನೂನು ಈಗ ಬರಬಹುದು. ಅವನಿಗಿಷ್ಟು ಹಾಕಿ ನೀವೂ ತಿನ್ನಿರಿ. ”

“ ಮನೂನು ಇಲ್ಲಿಯೇ ಯಥೇಷ್ಟವಾಗಿರುವನು. ” ಎಂದು ಗೋಪಾಲನು ನುಡಿಯಲು ದುರ್ಗಾಬಾಯಿಯು —

“ ದ್ವಾದಶಿಯ ಊಟವನ್ನು ಉಂಡು ನಿನಗೂ ಹಸಿವೆಯಿಲ್ಲೇನಪ್ಪಾ ? ಗೋಪೂ, ನೀನೂ ನಡೆ. ಫಲಾಹಾರವನ್ನು ತೀರಿಸಿಕೊಂಡು ಬರ್ರಿ. ” ಎಂದು ನುಡಿಯಲು ನಾಲ್ವರೂ ಹೋದರು. ದುರ್ಗಾಬಾಯಿಯ ಈ ವಾತ್ಸಲ್ಯವನ್ನು ನೋಡಿ ಗಂಗಕ್ಕನಿಗೆ ಉಸುಕಿನಲ್ಲಿ ಎಣ್ಣೆಯು ಹೊರಟಷ್ಟು ಆಶ್ಚರ್ಯವಾಯಿತು.

“ದುರ್ಗಾಬಾಯಿ, ಬರ್ರಿ. ಕುಳಿತುಕೊಳ್ಳಿರಿ.” ಎಂದು ಅವಳನ್ನು ಕುಳ್ಳಿರಿಸಿಕೊಂಡು—“ರಮೆಯು ಈಗ ನಿಮ್ಮೊಡನೆ ನೆಟ್ಟಗೆ ಇರುವಳೇ ? ” ಎಂದು ಬುದ್ಧಿಪೂರ್ವಕವಾಗಿ ಗಂಗಕ್ಕನು ಕೇಳಿದಳು.

“ ಹೆರವರ ಹೆಣ್ಣುಮಕ್ಕಳಿಗೆ ಸುಳ್ಳೇ ಅನ್ನಬಾರದು. ಉಪ್ಪುಂಡು ಸಪ್ಪಗೆನ್ನಲಿಕ್ಕೆ ನಾನೇನು ಹುಚ್ಚಳೇನು ? ನಗುತ್ತ ಕೆಲೆಯುತ್ತ ಈಗ ನೆಟ್ಟಗಿದ್ದಾಳೆ. ಆಗಿನ ಬುದ್ಧಿಯು ಈಗ ಬೇರೆಯಾಗಿದೆ. ಗುಣವನ್ನು ಕೊಟ್ಟು ಗುಣವನ್ನು ತೆಗೆದುಕೊಳ್ಳಬೇಕಂತೆ. ಅವಳಲ್ಲಿ ಅಂತಃಕರಣವು ಇದ್ದರೆ ನನಗೆ ಸಿಟ್ಟು ಹೇಗೆ ಬರುವದು? ಗಂಗಕ್ಕಾ, ಇನ್ನು ನನ್ನದೇನಿದೆ ಹೇಳಿರಿ! ಹಿಂದೆ ಬಾಳಿದಷ್ಟು ಮುಂದೆ ಬಾಳಬೇಕಾಗಿಲ್ಲ. ಮಗನೂ ಸೊಸೆಯೂ ಸಂಭ್ರಮದಿಂದಿದ್ದರೆ ನನಗೆ ಸಂತೋಷವು. ನನಗೇನೂ ಬಹಳ ಮಕ್ಕಳಿಲ್ಲ. ಒಬ್ಬನೇ ಒಬ್ಬನಾದ ಮಗನೂ, ಸೊಸೆಯೂ ಕಣ್ಣುಮೂಗು ನೊಯ್ಯದಂತೆ ಇದ್ದರಾಯಿತು. ”

ದುರ್ಗಾಬಾಯಿಯ ಕಕ್ಕುಲತೆಯ ಮಾತನ್ನು ಕೇಳಿ ಗಂಗಕ್ಕನಿಗೆ ಹುಚ್ಚು ಹಿಡಿದಂತಾಯಿತು. ಎಂಟು ದಿನಗಳ ಹಿಂದೆ ಲಟ್ಟಣಿಯ ಪ್ರಹಾರಮಾಡಿದ್ದನ್ನು ಅವಳು ಕಣ್ಣಾರೆ ಕಂಡಿದ್ದಳು. ಇಷ್ಟು ಸ್ವಲ್ಪ ದಿವಸಗಳಲ್ಲಿ ಅವಳ ಗುಣದಲ್ಲಿ ವಿಲಕ್ಷಣವಾದ ಅಭ್ಯಂತರವುಂಟಾದದ್ದನ್ನು ನೋಡಿ ಗಂಗಕ್ಕನು ಬೆರಗಾಗಿ ಇವಳು ದುರ್ಗಾಬಾಯಿಯು ಅಹುದೋ ಅಲ್ಲವೋ ಎಂದು ದಿಟ್ಟಿಸಿ ಅವಳ ಮುಖವನ್ನು ನೋಡಿದಳು !

ಮನೋಹರನೂ ಗೋಪಾಲನೂ ಫಲಾಹಾರವನ್ನು ತೀರಿಸಿಕೊಂಡು ಬಂದರು. “ನೀರು ತರಬೇಕಾಗಿದೆ, ಹೋಗುತ್ತೇನೆ.” ಎಂದು ದುರ್ಗಾಬಾಯಿಯು ಎದ್ದಳು.

“ಮನೋರಮೆಯೂ, ವಸಿತೆಯೂ ಜೋಡಾಗಿ ಅಲ್ಲಿಯೂ ಇಲ್ಲಿಯೂ ಕೂಡಿಯೇ ನೀರು ತುಂಬುವರು; ಬನ್ರಿ; ಕುಳಿತುಕೊಳ್ಳಿರಿ. ” ಗಂಗಕ್ಕನು ಹೇಳಿದಳು.

“ ಗಂಗಕ್ಕಾ, ಬರಿಯ ಹುಡುಗರನ್ನು ಹಚ್ಚಿ ಕುಳಿತುಕೊಳ್ಳುವದು ನನ್ನ ಕೈಯಿಂದಾಗದು ವನಿತೆಯೊಬ್ಬಳನ್ನೇ ಹಚ್ಚಿ ನೀವು ಸುಮ್ಮನೆ ಕುಳಿತುಕೊಳ್ಳ ಲಿಕ್ಕೆ ಬಹು ಗಟ್ಟಿಗರು. ”

“ಇಷ್ಟು ಮುದುಕರಾಗಿ ನಾವು ಇನ್ನೂ ಎಷ್ಟು ದಿವಸ ದುಡಿಯಬೇಕು ? ಕೈಸಾಗುವ ತನಕ ಕೂತಲ್ಲಿ ಒಂದು ಅಡಿಗೆಯನ್ನು ಮಾಡುವ ಕೆಲಸವು ನಮ್ಮದು. ದುರ್ಗಾಬಾಯಿ, ನೀವು ಹುಡುಗರಂತೆ ಕೆಲಸಮಾಡಲಿಕ್ಕೆ ಮೇಲಾಡಬೇಡಿರಿ. ಹರೆಯದವರು ಜಕ್ಕಿಸುತ್ತ ಮಾಡಿಕೊಳ್ಳುತ್ತಾರೆ. ”

“ ನನ್ನಲ್ಲಿ ಅಂಥ ಕಟಕತನವು ಬರಲಿಕ್ಕಿಲ್ಲವ್ವಾ! ” ಎಂದು ದುರ್ಗಾಬಾಯಿಯು ತನ್ನ ಮನೆಯ ಹಾದಿಯನ್ನು ಹಿಡಿದಳು.

“ ಮನೂ, ವಜ್ರಕ್ಕಿಂತ ಕಠಿಣಳಾಗಿದ್ದ ನಿನ್ನ ತಾಯಿಯು ಹೂವಿಗಿಂತ ಮೃದುವಾಗಿರುವಳು. ಇದೇನಪ್ಪಾ ವಿಚಿತ್ರವು? ”

“ ನಿಮ್ಮ ಮಂತ್ರಪ್ರಭಾವವೇ ಅಂತಹದು ! ” ಎಂದು ಮನೋಹರನು ನುಡಿದು ನಕ್ಕನು. “ ದುರ್ಗುಣಿಗಳಲ್ಲಿ ಸದ್ಗುಣೋದಯವಾಗುವದೂ, ಸದ್ಗುಣಿಗಳಲ್ಲಿ ದುರ್ಗುಣಗಳು ಜನಿಸುವದೂ ಅವರ ವಿನಾಶಕಾಲಕ್ಕೆಂದು ಜನರು ಅನ್ನುತ್ತಾರೆ. ಈ ಮಾತು ನಿಜವಿರಲಿ, ಇರದಿರಲಿ; ನನ್ನ ಮನಸ್ಸಿನಲ್ಲಿ ಏನೋ ಸಂಶಯವು ಬರತೊಡಗಿದೆ. ನೀವು ಜಾಗ್ರತೆಯಿಂದಿರಬೇಕು ಕಂಡಿರಾ ? ಸೌಜನ್ಯವನ್ನು ತೋರಿಸುತ್ತ ಕರಳಲ್ಲಿ ಕತ್ತರಿಯಾಡಿಸುವ ಘಾತುಕರು ಬಹಳ ಮಂದಿ ಇರುವರು. ಅವರಂತೆ ಇವಳಾದರೂ ಹೊಂಚುಹಾಕಿದಂತೆ ತೋರುವದು. ಆನಂದಮಯಚರ್ಯೆಯ ಒಳಮಗ್ಗಲು ಒಮ್ಮೊಮ್ಮೆ ಚಮಕಿಸುವ ಭೀಷಣವಾದ ಮುಖಚರ್ಯೆಯು ದೃಷ್ಟಿಗೆ ಬಿದ್ದಕೂಡಲೆ ಅವಳು ನಾಗಿಣಿಯಂತೆ ಕಚ್ಚುವ ಹವಣಿಕೆಯಲ್ಲಿದ್ದಂತೆ ತೋರುವದು. ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿದರೆ ಆ ಭೀಷಣವಾದ ಕಳೆಯು ಕಾಣುವದು. ಏನೇ ಇರಲಿ, ಹಲ್ಲು ಮುರಿಯದಿದ್ದ ಹಾವಿನ ಮೇಲೆ ಇಡುವಷ್ಟು ವಿಶ್ವಾಸವನ್ನು ಇವಳಲ್ಲಿಡತಕ್ಕದ್ದು ತಿಳಿಯಿತೇ ? ”

“ಅವಿಶ್ವಾಸವನ್ನು ಕಲ್ಪಿಸಲಿಕ್ಕೆ ಮಾರ್ಗವಿಲ್ಲ; ಆದರೂ ನಿಮ್ಮ ಹೇಳಿಕೆಯಂತೆ ಎಚ್ಚರದಿಂದಿರುವೆನು. ” ಎಂದು ಮನೋಹರನು ನುಡಿದು ತುಸುಹೊತ್ತು ವಿಚಾರಿಸಿ—

" ಛೀ, ಅವ್ವನಲ್ಲಿ ಇಲ್ಲದ್ದೊಂದು ದೋಷವನ್ನು ಕೊಡುವ ಪ್ರಯತ್ನ ಮಾಡುವದು ತೀರ ಅಯೋಗ್ಯವು. "

"ಬೆಳ್ಳಗಿದ್ದದ್ದನ್ನು ಹಾಲೆಂದು ತಿಳಿಯುವಂಥ ನಿನ್ನಂಥ ಸಜ್ಜನನಿಗೆ ಅವಳ ಗುಣವು ತಿಳಿಯದು. ಆದರೂ ದೂರದೃಷ್ಟಿಯಿಂದಿರು. " ಎಂದು ಗಂಗಕ್ಕನು ಹೇಳಿದಳು.

---

## ಆರನೆಯ ಜ್ವಾಲೆ

---

ದುರ್ಗಾಬಾಯಿಯು ಒಮ್ಮೆಲೆ ಸಜ್ಜನಳಾದದರಿಂದ ಚಂದ್ರಪುರದಲ್ಲಿ ಜನರು ಇವಳ ವಿಷಯಕ್ಕೆ ನಾನಾಪ್ರಕಾರದ ಶಂಕೆಯನ್ನು ಕಲ್ಪಿಸಹತ್ತಿದರು. **'ಮಧು ತಿಷ್ಠತಿ ಜಿಹ್ವಾಗ್ರೇ ಹೃದಯೇ ತು ಹಾಲಾಹಲಮ್'** ಎಂಬಂತೆ ಇವಳ ಸ್ಥಿತಿಯು ಇರುತ್ತದೆಂದು ಅವರು ತರ್ಕಿಸಿದ್ದರು. ಮನೋಹರನು ಮಾತ್ರ ತಾಯಿಯಲ್ಲಿ ಸಂಶಯವಿಲ್ಲದವನಾಗಿದ್ದರೂ ಪೂರ್ಣ ವಿಶ್ವಾಸವುಳ್ಳವನಾಗಿದ್ದಿಲ್ಲ.

ಮನೋಹರನೊಬ್ಬನೇ ಇದ್ದದ್ದನ್ನು ನೋಡಿ ದುರ್ಗಾಬಾಯಿಯು ಅವನ ಬಳಿಗೆ ಬಂದು—"ಮನೂ, ಪತಿಯ ಕೀರ್ತಿಗೂ ಅಪಕೀರ್ತಿಗೂ ಸತಿಯೇ ಮುಖ್ಯಕಾರಣವಾಗಿರುವಳು. ಹೆಂಗಸರು ದುರ್ಮಾರ್ಗಪ್ರವೃತ್ತರಾದರೆಂದರೆ ಗಂಡಸಿನ ಮಾನವನ್ನು ಕಳೆಯುಬಿಡುವರು. ಅಂತೇ ಸುಜ್ಞರು ಸ್ತ್ರೀಯರ ಸ್ವೇಚ್ಛಾವೃತ್ತಿಯ ಪ್ರತಿಬಂಧಮಾಡುವರು. ಗಂಡಸು ಬಯಲ ಬಂಗಾರವು. ಅವನು ಹೇಗೆ ನಡೆದರೂ ಚಂದಕಾಣುವದು. ಹೆಂಗಸರು ತಮ್ಮ ಶೀಲಕ್ಕೆ ಕಲಂಕವನ್ನು ತಂದು......" " ಅವ್ವಾ, ಇದು ಯಾತರ ಪ್ರಸ್ತಾವನೆಯು? " ನಡುವೇ ಬಾಯಹಾಕಿ ಮನೋಹರನು ಕೇಳಲು ದುರ್ಗಾಬಾಯಿಯು—

"ನಮ್ಮ ಮನೆತನವೆಂದರೆ ಸುತ್ತು ಹನ್ನೆರಡು ಹರದಾರಿಗಳಲ್ಲಿ ಪ್ರಖ್ಯಾತಿಯುಳ್ಳದ್ದು. ಇಂಥ ದೊಡ್ಡ ಮನೆಯ ಬೆಲೆಯು ಕಟ್ಟುವ ಹೊತ್ತು ಬಂದೊದಗಿದೆ!"

"ನಿನ್ನ ಪೀಠಿಕಾಪ್ರಕರಣವನ್ನು ಮುಗಿಸಿ ಕಥಾಭಾಗವನ್ನು ಹೇಳಬಾರದೇ?" ಮನೋಹರನು ಬೇಸರಗೊಂಡು ತಾಯಿಯನ್ನು ಕೇಳಲು ಅವಳು—

"ಮೊದಲೇ ನೀನು ಸಿಟ್ಟಿನವನಾದದರಿಂದ ಅನಿಷ್ಟಪ್ರಸಂಗವು ಒದಗೀತೆಂದು ಅಂಜಿಕೊಂಡಿರುವೆನು. ಹೇಳದಿದ್ದರೆ ನಿರ್ವಾಹವಿಲ್ಲ. ಆದರೆ ಒಮ್ಮೆಲೆ ಸಿಟ್ಟಿನ ಕೈಯಲ್ಲಿ ಬುದ್ಧಿಯ ಕೊಡಬಾರದು. ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡಬೇಕಂತೆ. ಒಮ್ಮೆಗೆ ನೀನು ಕತ್ತಿಯನ್ನು ಹಿರಿಯುವದಿಲ್ಲವೆಂದು ವಿಶ್ವಾಸ

ಕೊಟ್ಟರೆ ಹೇಳುತ್ತೇನೆ. ” ದುರ್ಗಾಬಾಯಿಯು ತಾನು ಉಸಿರಬೇಕಾಗಿದ್ದ ವರದ ವಾಣಿಯಲ್ಲಿ ಮಗನ ವಿಶ್ವಾಸವನ್ನು ಹುಟ್ಟಿಸಲಿಕ್ಕೆ ಪ್ರಯತ್ನಮಾಡಹತ್ತಿದಳು.

“ ಆಗಲಿ, ನೀನು ಹೇಳಬೇಕಾವ ಸಂಗತಿಯು ಯಾವದು ? ”

“ ಒಂದೇ ಸೂಕ್ಷ್ಮವಾದ ಮಾತಿನಲ್ಲಿ ಹೇಳುತ್ತೇನೆ. ಜಾಣನಾದರೆ ಅಷ್ಟ ರಿಂದ ತಿಳಿದುಕೋ ! ” ಎಂದು ದುರ್ಗಾಬಾಯಿಯು ನುಡಿದು—“ ಮನೋ ರಮೆಯ ಆಚರಣೆಯ ಕಡೆಗೆ ಲಕ್ಷ್ಯಗೊಡುತ್ತಿರು. ಗೋಪ್ಯಾನು ಮಿತ್ರನೆಂದು ಆ ಘಾತುಕಿಯಲ್ಲಿ ನಂಬಿಗೆಯನ್ನಿಡಬೇಡ. ಒಂದು ಮಾತಿನಲ್ಲಿ ಹೇಳಬೇಕಾದರೆ ನೀನು ಅವನ ಸ್ನೇಹವನ್ನು ಬಿಟ್ಟು ಮನೋರಮೆಯನ್ನು ಅವರ ಮನೆಗೆ ಹೋಗ ದಂತೆ ಬಿಗಿಮಾಡು. ಅಂದರೆ ನಮ್ಮ ಗೌರವವು ಉಳಿಯುವದು. ಇಲ್ಲದಿದ್ದರೆ ಕಾಸಿಗೆ ಪಂಥೇರಾಗಿ ಹೋಗಬೇಕಾಗುವದು. ಹೊಯ್ಮಾಲಿ ಹೆಂಗಸರೊಡನೆ ಸಲಿಗೆಯನ್ನು ಬಳೆಸಿದ್ದರ ಫಲವನ್ನು ಉಣ್ಣದಿದ್ದರೆ ನಿರ್ವಾಹವಿಲ್ಲ. ಗರತಿಯ ರಂತೆ ಕಾಣುವವರಲ್ಲಿ ಎಂಥ ದುರ್ಗುಣಗಳು ವಾಸಿಸುತ್ತವೆಂಬದರ ಅನುಭವವು ಈಗ ನನಗೆ ಬಂದಂತಾಯಿತು. ”

ತಾಯಿಯ ಮಾತುಗಳನ್ನು ಕೇಳಿ ಮನೋಹರನು ದಂಗುಬಡೆದು ಕುಳಿ ತನು. ಅವನಲ್ಲಿಯ ಸಾರಾಸಾರವಿಚಾರವು ನಷ್ಟವಾಯಿತು. ಪತ್ನಿಯ ವಿಷಯ ವಾಗಿ ತಿರಸ್ಕಾರವು ಹುಟ್ಟಿತು. ಸಾತ್ವಿಕಳಿರುವಳೆಂಬ ಭ್ರಮೆಯಿಂದ ಸಲಿಗೆ ಯನ್ನು ಕೊಟ್ಟದ್ದರಿಂದಲೇ ಅವಳು ದುರ್ಮಾರ್ಗ ಪ್ರವೃತ್ತಳಾದಳೆಂದು ಅವನು ಗ್ರಹಿಸಿದನು.

“ಮನೂ, ಸುಮ್ಮನೆ ಚಿಂತಿಸಬೇಡ. ‘ನಾ ಮುಂದೆ ನೀ ಮುಂದೆ ’ ಎಂದು ನಿನಗೆ ಕನ್ಯೆಯರನ್ನು ಕೊಡಲಿಕ್ಕೆ ಜನರು ಆತುರಬಡುವರು. ಈ ದುಶ್ಚರಿತ್ರ ಳನ್ನು ನಿಂತ ಕಾಲ ಮೇಲೆ ಮನೆಬಿಟ್ಟು ಹೊರಗೆ ಹಾಕಿ ಎರಡನೆಯ ಕೆಲಸಮಾಡು”

ದುರ್ಗಾಬಾಯಿಯು ಹೀಗೆ ನುಡಿದ ಕೂಡಲೆ ಮನೋಹರನ ಮನಸ್ಸಿನಲ್ಲಿ ಯಾವದೋ ಒಂದು ವಿಚಾರವು ಬಂದು–

“ಅವ್ವಾ, ನೀನು ಅವಳಲ್ಲಿ ಕುತ್ಸಿತವಾದ ದೋಷವನ್ನು ಆರೋಪಿಸುವದ ರಿಂದ ನಿನ್ನ ರಾಕ್ಷಸಿಮಹತ್ವಾಕಾಂಕ್ಷೆಯು ಪೂರ್ಣವಾಗಲಾರದೆಂದು ತಿಳಿ. ಅವಳ ನಿರ್ಮಲವಾದ ಹೃದಯವನ್ನು ನಾನು ತಿಳಿದವನಿರುವೆನು. ಮತ್ಸರ ಗ್ರಸ್ತಳಾಗಿ ನಿರ್ದೋಷಿಯಲ್ಲಿ ದೋಷಾರೋಪಣೆಯನ್ನು ಮಾಡುವದು ಈಗೀಗ ಸಜ್ಜನಳೆಂದೆನ್ನಿಸಿಕೊಳ್ಳಹತ್ತಿದ ನಿನ್ನ ಶೀಲಕ್ಕೆ ಯೋಗ್ಯವಲ್ಲ. ”

ಮನೋಹರನ ಮಾತುಗಳನ್ನು ಕೇಳಿ ದುರ್ಗಾಬಾಯಿಯು ಬೆಚ್ಚಿಬಿದ್ದಳು. ಮೇಲು ಬಿದ್ದು ಮಾತಾಡಿದ್ದಕ್ಕೆ ತನ್ನ ಮನಸ್ಸಿನಲ್ಲಿಯ ದುರುದ್ದೇಶದ ಗಂಧವು ಅವನಿಗೆ ತಗಲಿತೆಂದು ಅವಳು ತಿಳಿದು ತನ್ನ ಬಾಣವು ವ್ಯರ್ಥವಾದದ್ದಕ್ಕೆ ಪಶ್ಚಾತ್ತಾಪ ಬಡಹತ್ತಿದಳು. ಆದರೂ ಅವಳು ಹತಾಶಳಾಗದೆ–

"ನನ್ನ ನಿದರ್ಶನಕ್ಕೆ ಬಂದದರಿಂದ ನಿನಗೆ ಹೇಳಿರುವೆನು. ಪಾಪವು ಮುಚ್ಚುವದಿಲ್ಲ. ಇಂದಿಲ್ಲ ನಾಳೆಯಾದರೂ ನನ್ನ ಮಾತಿನ ಸತ್ಯತೆಯು ಗೋಚರವಾಗಬಹುದು." ಗಂಗಕ್ಕನ ತರ್ಕದಂತೆ ತನ್ನ ತಾಯಿಯು ಗೋಮುಖವ್ಯಾಘ್ರಳಾಗಿರುವಳೆಂದು ಮನೋಹರನ ದೃಷ್ಟಿಪಥದಲ್ಲಿ ಬಂತು. ಅವನು ತಾಯಿಯ ಈ ದೀರ್ಘಸಾಹಸವನ್ನು ನೋಡಿ ಸಂತಪ್ತನಾದನು.

"ಅವ್ವಾ, ನಿನ್ನ ಮನಸ್ಸಿನ ಇಚ್ಛೆಯನ್ನು ಪೂರ್ಣಮಾಡಿಕೊಳ್ಳಲಿಕ್ಕೆ ಇಂಥ ಕುತ್ಸಿತವಾದ ವಿಚಾರವನ್ನು ಬಿಟ್ಟು ಬೇರೆ ಮಾರ್ಗಗಳಿದ್ದಿಲ್ಲವೇ ? ಸಾಧ್ವೀ ಮಣಿಗಳ ವಿಷಯದಲ್ಲಿ ಇಂಥ ದೋಷಗಳನ್ನು ಕಲ್ಪಿಸುವದು ಅಧೋಗತಿಯ ಸಾಧನವಲ್ಲವೇ? ಈಗ ನೀನು ನೂಲೆಳೆಯಿಂದ ಕೊರಳು ಕೊಯ್ಯುವದಕ್ಕಾರಂಭಿಸಿರುವೆ. ಸೌಜನ್ಯದ ವೇಷವನ್ನು ತಾಳಿ ಇಂಥ ದೋಷಗಳನ್ನು ಬಿಂಬಿಸಬೇಕೆಂದು ದೂರದೃಷ್ಟಿಯಿಂದ ರಚಿಸಿದ ನಿನ್ನ ವ್ಯೂಹವು ವ್ಯರ್ಥವಾದದ್ದಕ್ಕೆ ನಿನಗೆ ಪಶ್ಚಾತ್ತಾಪವಾಗಿರಬಹುದಲ್ಲವೇ ? ಈ ಹೊತ್ತಿನಲ್ಲಿ ನಾನು ಅವಿಚಾರಿಯಾಗಿ ನಿನ್ನ ಮಾತನ್ನು ನಂಬಿದ್ದರೆ ಎಂಥ ಅನರ್ಥವಾಗುತ್ತಿತ್ತು ! ನಮ್ಮ ವಿಷಯಕ್ಕೆ ನೀನು ಇಷ್ಟೇಕೆ ಮತ್ಸರವುಳ್ಳವಳಾಗಿರುವೆಯೋ ಏನೋ "

"ಮನೂ, ಎಂಥವಳಿಗೆ ಎಂಥಮಾತನ್ನಾಡುವೆಯೋ ? ನಿಮ್ಮನ್ನು ಕಂಡರೆ ನಾನು ಮತ್ಸರಪಡುವೆನೇ ? ರಮೆಯು ಈಗ ಸೌಜನ್ಯದ ಕಣಿಯಾಗಿರುವಳೆಂಬು ಅವಳನ್ನು ಬಹಳವಾಗಿ ಪ್ರೀತಿಸುತ್ತಿರುವೆನು. ಆದರೆ ಅವನು ಗೋಪಾಲನಲ್ಲಿ ಪ್ರೇಮವಿಟ್ಟದ್ದು ನನ್ನ ನಿದರ್ಶನಕ್ಕೆ ಬಂದದ್ದರಿಂದ ಅವಳ ಈ ದುರ್ಗುಣವನ್ನು ಅಲ್ಲಗಳೆಯದೆ ಇರಲಿಕ್ಕಾಗಲಿಲ್ಲ!"

"ಅವ್ವಾ, ನಿನ್ನ ಮೋಸದ ಮಾತುಗಳನ್ನು ನಂಬಲಿಕ್ಕೆ ನಾನು ಅಷ್ಟು ಮೂರ್ಖನಿರುವದಿಲ್ಲ. ಸುಮ್ಮನೆ ದಣಕೊಳ್ಳಬೇಡ. ತಾಯಿಯೆಂದು ಕೈಗಾದಿರುವೆನು; ಇಲ್ಲದಿದ್ದರೆ ನಿನ್ನ ಮತ್ಸರಗ್ರಸ್ತವೂ ಘಾತುಕವೂ ಆದ ದುಷ್ಟ ಉದ್ದೇಶವನ್ನು ನಾಲ್ಕು ಜನರಿಗೆ ತಿಳಿಸಿ ನಿನ್ನ ಮರ್ಯಾದೆಯನ್ನು ತೆಗೆದುಕೊಂಡು ಬಿಡುತ್ತಿದ್ದೆನು.

ಮಗನ ಮಾತುಗಳನ್ನು ಕೇಳಿ ದುರ್ಗಾಬಾಯಿಗೆ ಬಹಳೇ ಕಳವಳವಾಯಿತು.

ಇಷ್ಟು ದಿವಸ ಆತ್ಮ ಸಂಯಮನದಿಂದ ಸಭ್ಯತನದ ವೇಷವನ್ನು ಧರಿಸಿ ದೊಡ್ಡ ಕಾರ್ಯವನ್ನು ಸಾಧಿಸಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದ ವ್ಯೂಹವು ನಿಷ್ಫಲವಾದದರಿಂದ ಅವಳಿಗುಂಟಾದ ಕಲ್ಪನಾತೀತವಾದ ದುಃಖವನ್ನು ವರ್ಣಿಸುವದು ಅಸಾಧ್ಯವೇ ಸರಿ!

---

## ಏಳನೆಯ ಜ್ವಾಲೆ

---

ಅಕ್ಷಯ್ಯ ತೃತೀಯೆಯ ಪರ್ವವು. ಚಂದ್ರಪುರದಲ್ಲಿ ಗೌರಿಯ ಉತ್ಸವವು ಒಳ್ಳೆಯ ಆನಂದದಾಯಕವಾಗಿ ನಡೆದಿತ್ತು. ಸುವಾಸಿನಿಯರು ಹೂವೀಳ್ಯಕ್ಕೆ ತಂಡ ತಂಡವಾಗಿ ಹೊರಟಿದ್ದರು. ಮನೋರಮೆಯಾದರೂ ವನಿತೆಯ ಮನೆಗೆ ಹೂವಿಳ್ಯಕ್ಕೆ ಹೋಗಿದ್ದಳು.

ವಸಂತನೊಬ್ಬನೆ ಕೋಣೆಯಲ್ಲಿ ಕುಳಿತಿದ್ದನು. ದುರ್ಗಾಬಾಯಿಯು ವಸಂತನ ಕೋಣೆಯ ಕಡೆಗೆ ಸೂಕ್ಷ್ಮದೃಷ್ಟಿಯಿಂದ ನೋಡುತ್ತ ಕಿಡಕಿಯ ಬಳಿಯಲ್ಲಿ ನಿಂತುಕೊಂಡಿದ್ದಳು. ಆಗ ಅವಳಿಗೆ ಏನು ತಿಳಿಯಿತೋ ಯಾರು ಬಲ್ಲರು ? ಅವಳು ಅವಸರದಿಂದ ಮನೋಹರನ ಬಳಿಗೆ ಬಂದು—

"ಮನೂ; ನಾನು ನಿನಗೆ ಹೇಳಿದ್ದು ಹುಡುಗಾಟಕೆಯಾಗಿ ಹೋಗಿತ್ತು. ಇಲ್ಲಿ ನೋಡು. ನಿನ್ನ ಪತ್ನಿಯ ಹಾಗು ಗೋಪಾಲನ ಪ್ರೇಮಲೀಲೆಗಳನ್ನು ಯಥೇಷ್ಟವಾಗಿ ನೋಡಿ ಆನಂದಬಡು." ಎಂದು ಅವನನ್ನು ಕಿಡಕಿಯ ಬಳಿಯಲ್ಲಿ ಕರೆದೊಯ್ದಳು.

ಗೋಪಾಲನ ಮನೆಯು ಮನೋಹರನ ಮನೆಯಿಂದ ತೀರ ಸಮೀಪವಿಲ್ಲದಿದ್ದರೂ, ಹೇಳಿಕೊಳ್ಳುವಷ್ಟು ದೂರವಿದ್ದಿಲ್ಲ. ಆದದರಿಂದ ಅವನ ಮನೆಯ ಉದ್ಯಾನದಲ್ಲಿಯ ನೋಟವೆಲ್ಲ ಅವನಿಗೆ ಕಂಡಿತು. ಮನೋರಮೆಯೂ ಗೋಪಾಲನೂ ಉದ್ಯಾನದಲ್ಲಿ ನಗುವದೂ ಕೆಲೆಯುವದೂ ಪರಸ್ಪರರು ಪ್ರೇಮದೃಷ್ಟಿಯಿಂದ ನೋಡುವದೂ ಮನೋಹರನ ಕಣ್ಣಿಗೆ ಬಿದ್ದ ಕೂಡಲೆ, ಅವನು ಸಿಟ್ಟಿನಿಂದ ಹುಚ್ಚನಾಗಿ ಹೋದನು. ಕೂಡಲೆ ಮದ್ದು ಗುಂಡುಗಳನ್ನು ತುಂಬಿ ಸಿದ್ಧವಿರುವ ಬಂದೂಕವನ್ನು ಕೈಯಲ್ಲಿ ತೆಗೆದುಕೊಂಡು ಮನೋರಮೆಯ ಮೇಲೆ ಗುರಿಯನ್ನಿಟ್ಟು ಅದರ ಕಿವಿಯನ್ನು ಜಗ್ಗತಕ್ಕವನು; ಅಷ್ಟರಲ್ಲಿ ದುರ್ಗಾಬಾಯಿಯು ಅವನ ಕೈಯನ್ನು ಹಿಡಿದು ಬಂದೂಕವನ್ನು ಶಕ್ತಿಯಿಂದ ಬಿಡಿಸಿಕೊಂಡು—

"ಮನೂ, ಇದೆಂಥ ಅನಾಹುತವನ್ನು ಮಾಡುವದಕ್ಕಾರಂಭಿಸಿದೆಯೋ? ಅವಳನ್ನು ಕೊಂದು ನೀನು ಆಜನ್ಮವಾಗಿ ಕರಿನೀರಿನ ಶಿಕ್ಷೆಯನ್ನು ಅನುಭವಿಸ

ಬೇಕೆಂದು ಮಾಡಿರುವೆಯೇನು ? ಅವಳನ್ನು ಕೊಂದರೆ ನಿನಗೆ ಬರುವ ಭಾಗ್ಯ ವೇನು ? ಆ ಜಾರಿಣಿಯನ್ನು ಮನೆಯಿಂದ ಹೊರಡಿಸಿ ಬಿಟ್ಟರಾಯಿತು; ಅವಳ ದುಷ್ಕೃತಿಗೆ ತಕ್ಕ ಶಿಕ್ಷೆಮಾಡಿದಂತಾಗುವದು."

"ಅವ್ವಾ, ಅಂಬು ನಿನ್ನ ಮಾತನ್ನು ನಾನು ವಿಪರೀತವಾಗಿ ತಿಳಿದಿದ್ದೆನು. ಸಾಧ್ವಿಯಂತೆ ಆಡಂಬರವನ್ನು ಮಾಡುತ್ತ, ಕುಲೀನಸ್ತ್ರೀಯರ ಶೀಲಕ್ಕೆ ಭಂಗ ವನ್ನುಂಟು ಮಾಡುವ ಕರ್ತವ್ಯವನ್ನು ಮಾಡಹತ್ತಿರುವ ಜಾರಿಣಿಯನ್ನು ನಿಲ್ಲಿಸಿ ಸುಡಿಸಿವರೂ ಸಿಟ್ಟು ತೀರದಾಗಿದೆ. ಮಿತ್ರನಾದ ಗೋಪಾಲನು ಕರಳಿಗೆ ಕತ್ತರಿ ಯನ್ನು ಹಚ್ಚಿದನು." ಎಂದು ಮನೋಹರನು ನಿಟ್ಟುಸಿರು ಬಿಟ್ಟನು.

ಸೂರ್ಯನು ಪಶ್ಚಿಮಾಂಬುಧಿಯನ್ನು ಪ್ರವೇಶಿಸಿ ಬಹಳ ಹೊತ್ತಾಗಿತ್ತು. ಸಂಧಿಪ್ರಕಾಶವು ಅಡಗಿ ಮಬ್ಬುಗತ್ತಲಾಗಹತ್ತಿತ್ತು. ಅಕ್ಷಯ್ಯತೃತೀಯೆಯ ಬಾಲಚಂದ್ರನು ಆ ತಮವನ್ನು ದೂರೀಕರಿಸಲಿಕ್ಕೆ ಅಸಮರ್ಥನಿದ್ದನು. ಕತ್ತ ಲಾಯಿತೆಂದು ಮನೋರಮೆಯು ವನಿತೆಯ ಮಂದಿರದಿಂದ ಹೊರಬಿದ್ದು ತನ್ನ ಮನೆಗೆ ಬಂದಳು. ಅವಳು ತನ್ನ ಪತಿಯ ಬಳಿಗೆ ಬಂದು—"ನೀವು ಇಂದು ವನಿ ತೆಯ ಮನೆಗೆ ಬರಲಿಲ್ಲ. ಅಲ್ಲಿಯ ಗೌರಿಯ ಸಂಭ್ರಮವನ್ನು ನೋಡಿದರೆ ದಂಗು ಬಡೆಯಬಹುದು."

"ಗೌರಿಯ ಸಂಭ್ರಮವನ್ನೇನು ಮಾಡುವೆ ? ಶಂಕರನ ಸಡಗರವನ್ನು ನೋಡಿದರೆ ಹುಚ್ಚು ಬಿಟ್ಟು ನಿಚ್ಚಳಾಗಬಹುದು !"

"ಅಂದರೆ ? ನಿಮ್ಮ ಮಾತಿನ ಅರ್ಥವೇ ಆಗಲೊಲ್ಲದು."

"ಅನರ್ಥಕಾರಿಣಿಯಾದ ನಿನ್ನಂಥ ಜಾರಿಣಿಗೆ ಅರ್ಥವೆಲ್ಲಿ ?"

ಪತಿಯ ಉದ್ಗಾರವನ್ನು ಕೇಳಿ ಮನೋರಮೆಯ ಮೇಲೆ ವಜ್ರಾಘಾತವಾ ದಂತಾಯಿತು. ಅವಳು ನಿಂತಲ್ಲಿಯೇ ಭೂಮಿಗೆ ಬಿದ್ದು ಮೂರ್ಛಿತಳಾದಳು. ಕೆಲಹೊತ್ತಿನ ಮೇಲೆ ತನ್ನಷ್ಟಕ್ಕೆ ತಾನೇ ಚೇತರಿಸಿಕೊಂಡು ತನ್ನ ಮೇಲೆ ಪತಿಯು ವ್ಯಭಿಚಾರದೋಷವನ್ನು ಆರೋಪಿಸಿರುವನೆಂದು ನೆನೆದು ಬೋರಾಡಿ ಅಳಹತ್ತಿ ದಳು. ಅವಳ ಶೋಕವನ್ನು ಕೇಳಿ ಎಂಥ ಕೆಚ್ಚೆದೆಯವನಿಗೂ ದಯವು ಹುಟ್ಟು ತ್ತಿತ್ತು. ವಿಕಲ್ಪಭಾವನಾಪ್ರೇರಿತನಾದ ಮನೋಹರನು ಈಗ ಕಲ್ಲಿಗಿಂತಲೂ ಕಲ್ಲಾಗಿದ್ದನು. ಅವನು ಪತ್ನಿಯ ರೋದನವನ್ನು ಕೇಳಿ—

"ಅತ್ತು ಕರೆದು ಮೋಹಕ್ಕೊಳಪಡಿಸಬೇಕೆನ್ನುವ ನಿನ್ನ ತಂತ್ರವು ನಿಷ್ಫ ಯೋಜಕವೆಂದು ದೃಢಪಡಿಸಿಕೊಂಡು ಈಗಿಂದೀಗ ಮನೆಬಿಟ್ಟು ತೆರಳು. ಆ ನಿನ್ನ

ವಿಟಗಾರನಾದ ಗೋಪಾಲನನ್ನು ಹೊಂದಿ ಸುಖಿಯಾಗಿರು." ಕಲ್ಪನಾತೀತವಾದ ಅಪವಾದವು ಬಂದದ್ದನ್ನು ನೋಡಿ ಮನೋರಮೆಯು ಸಂತಪ್ತಳಾದಳು. ಅವಳು ಎಂಥ ಸೌಮ್ಯಳಾಗಿದ್ದರೂ ಅಪವಾದಶಿಖಿಯಿಂದ ಅವಳ ಸಾಧುಭಾವವು ಸಂಪೂರ್ಣವಾಗಿ ನಷ್ಟವಾಯಿತು. ಕಣ್ಣಿನಿಂದ ಕಿಡಿಗಳು ಹೊರಬೀಳುವವೋ ಏನೋ ಎಂಬಂತೆ ಅವಳ ಪ್ರಶಾಂತವಾದ ನೇತ್ರಗಳು ತಾಮ್ರವರ್ಣವನ್ನು ಹೊಂದಿದವು,

"ಸಾಧ್ವೀಜನರಲ್ಲಿ ವೃಥಾಪವಾದವನ್ನು ಹೊರಿಸುವ ವಿದ್ಯೆಯನ್ನು ಅತ್ತೆಯವರು ಕಲಿಸಿರುವದಾಗಿ ಕಾಣುತ್ತದೆ! ನಾನು ನಿಮಗೆ ಬೇಸರಾಗಿದ್ದರೆ ಇಂಥ ಕುತ್ಸಿತವಾದ ದೋಷವನ್ನೀಯದೆ ಹೊರಗೆ ಹಾಕಿದ್ದರೆ ಸಂತೋಷವಾಗುತ್ತಿತ್ತು!"

"ಪ್ರತ್ಯಕ್ಷವಾಗಿ ಕಂಡ ವಿಷಯವಿರಲು ನೀನು ಮುಚ್ಚಿಕೊಳ್ಳುವದಕ್ಕೆ ಹೋದರೆ ಸಾಗುವಂತಿಲ್ಲ. ಒಳ್ಳೆಯ ಮಾತಿನಿಂದ ಹೊರಬೀಳದಿದ್ದರೆ ಇಗೋ ಈ ಬಂದೂಕವು ನಿನ್ನನ್ನು ಈ ಲೋಕದಿಂದ ಹೊರದೂಡಲಿಕ್ಕೆ ಸಿದ್ಧವಿರುವದು!"

"ಅಗತ್ಯ! ನನಗಿನ್ನು ಜೀವದ ಮೇಲಿನ ವಾತ್ಸಲ್ಯವು ಅಳಿದುಹೋಯಿತು. ಸುಮ್ಮಸುಮ್ಮನೆ ನನ್ನ ನಿರ್ಮಲವಾದ ಕೀರ್ತಿಗೆ ಕಲಂಕವನ್ನು ಹಚ್ಚಿದಿರಿ. ಬೇಗನೆ ನನ್ನನ್ನು ಈ ಬಂಧನದಿಂದ ದೂರಮಾಡಿಬಿಡಿರಿ."

"ಮನೂ, ಇದೇನು ಅನರ್ಥವನ್ನು ನಡಿಸಿರುವೆಯೊ? ಏನೋ ಒಮ್ಮೆ ಕಾಲುಜಾರಿ ಬಿದ್ದಿರುವಳೆಂದು ಅವಳನ್ನು ಕೊಲ್ಲುವ ಸಾಹಸವನ್ನು ಮಾಡಿರುವೆಯೇನು?" ದುರ್ಗಾಬಾಯಿಯು ಬಂದು ನುಡಿದಳು.

"ಅತ್ಯಾ, ನೀವು ಹಚ್ಚಿದ ಬೇಗೆಯೇ ಇದು!" ಮನೋರಮೆಯು ಸಿಟ್ಟಿನಿಂದ ನುಡಿದ ಕೂಡಲೆ ದುರ್ಗಾಬಾಯಿಗೆ ಬಹಳೇ ಸಂತಾಪವು ಹುಟ್ಟಿತು. ಆದರೂ ಅವಳು ಸಹನ ಮಾಡಿಕೊಂಡು—

"ರಮೇ, ನೀನು ನಮ್ಮ ಮನೆತನದ ಮರ್ಯಾದೆಯನ್ನು ಕಳೆದು ಮುಂದಿಗೆ ಮಾತನಾಡುವದಕ್ಕೆ ನಾಚಿಕೆ ಬರುವದಿಲ್ಲವೆ? ಹೋಗು, ಆ ಗೋಪ್ಯಾನು ಉದ್ಯಾನದಲ್ಲಿ ದಾರಿಯನ್ನು ನೋಡುತ್ತಿರುವನಾದೀತು!"

"ನಿಮ್ಮ ಇಂದ್ರಜಾಲವು ಒಳ್ಳೆಯ ಅವರ್ಣನೀಯವಾದದ್ದು! ಈ ವ್ಯೂಹವನ್ನು ನೀವು ಒಳ್ಳೆಯ ಪ್ರಯತ್ನಪೂರ್ವಕವಾಗಿ ರಚಿಸಿರುವಿರಿ! ಆಗಲಿ, ನನ್ನ ಪ್ರಾರಬ್ಧಕ್ಕೆ ನೀವೇನು ಮಾಡೀರಿ!" ಎಂದು ಮನೋರಮೆಯು ದುಃಖಿಸುತ್ತ ಕುಳಿತಳು.

"ಇನ್ನು ನನ್ನ ಕಣ್ಣಿಗೆ ನಿನ್ನ ಪಾಪಿಯಾದ ಮುಖವು ಬೀಳಲಿಕ್ಕಾಗದು.

ಕ್ಷಣಹೊತ್ತು ಸಹ ಇಲ್ಲಿರದೆ ಮನಬಂದತ್ತ ನಡೆ!" ಎಂದು ಮನೋಹರನು ಸಿಟ್ಟಿನಿಂದ ಹೇಳಿದನು.

"ಈಗ ರಾತ್ರಿಯಾಗಿದೆ; ಬೆಳಗಾದ ಮೇಲೆ ಹೋಗಲಿ." ಎಂದು ದುರ್ಗಾಬಾಯಿಯು ಮಗನನ್ನು ಸಂತಯಿಸಿ—

"ನಡಿಯೇ ಗಯ್ಯಾಳೀ, ದನದ ಮನೆಯಲ್ಲಿ ಬೀಳು." ಎಂದು ಹೇಳಲು ಮನೋರಮೆಯು ಕುಳಿತ ಸ್ಥಾನದಿಂದ ಕದಲಲಿಲ್ಲ.

"ಈ ಚೇಡಿಯನ್ನು ನೀನೇ ಹೊರದೂಡು. ಇವಳನ್ನು ಹೊರಗೆ ಹಾಕುವದು ನನ್ನಿಂದಾಗಲಿಕ್ಕಿಲ್ಲ." ಎಂದು ನುಡಿದು ದುರ್ಗಾಬಾಯಿಯು ಅಲ್ಲಿಂದ ಹೊರಟು ಹೋದಳು.

"ಅತ್ತೆಯವರ ಮಾತಿನಲ್ಲಿ ವಿಶ್ವಾಸವಿಟ್ಟು ಈ ಪರಿಯಾಗಿ ಸಂಶಯವನ್ನು ತೆಗೆದುಕೊಂಡಂತೆ ಕಾಣುವದು. ನಾಥ, ನಿಮ್ಮ ಮುಖವನ್ನು ನೋಡಿ ಅತ್ತೆಯ ಕಟುತರವಾದ ಪೀಡೆಯನ್ನೆಲ್ಲ ಸಹಿಸಿದ್ದೆನು. ನೀವೇ ಬೇಸರ ಮಾಡಿದ ಮೇಲೆ ನಾನು ಹೇಗೆ ಬಾಳಲಿ? ನನ್ನ ವಿಷಯಕ್ಕೆ ಇಲ್ಲದ ಅನುಚಿತಕಲ್ಪನೆಯನ್ನು ಮಾಡಬೇಡಿರಿ. ಎದೆಯನ್ನು ಸೀಳಿ ನೋಡಿರಿ. ಅದು ಸ್ಫಟಿಕಮಣಿಯಂತೆ ಶುಭ್ರವೂ ನಿರ್ಮಲವೂ, ಪವಿತ್ರವೂ ಇರುವದು." ಎಂದು ನುಡಿದು ಅವಳು ಪತಿಯ ಪಾದಗಳ ಮೇಲೆ ಮಸ್ತಕವನ್ನಿರಿಸಿ ದುಃಖಮಾಡಹತ್ತಿದಳು. ಅವನ ಪಾದಗಳು ಅಶ್ರುಗಳಿಂದ ತೊಯ್ದು ಹೋದವು. ಅವಳ ದೀನವಾದ ವಾಣಿಯಿಂದ ಅವನಲ್ಲಿ ದಯವು ಹುಟ್ಟಲಿಲ್ಲ; ಸಂತಾಪವು ಮಾತ್ರ ಇಮ್ಮಡಿಸಿತು!

"ನಿರ್ಲಜ್ಜಳಾದ ಜಾರಿಣಿಯೇ, ನಿನ್ನ ಡೋಕಾರತನವನ್ನು ಬಲ್ಲೆನು." ಎಂದು ಮನೋಹರನು ನುಡಿದು ಅರ್ಧಚಂದ್ರಪ್ರಯೋಗವನ್ನು ಮಾಡಿದನು. ಪ್ರಚಂಡವಾದ ಬಿರುಗಾಳಿಯಿಂದ ಇಳೆಗುರುಳುವ ರಂಭಾವೃಕ್ಷದಂತೆ ಅವಳು ಭೂಮಿಗೆ ಬಿದ್ದು ಮೂರ್ಛಿತಳಾದಳು!

---

## ಎಂಟನೆಯ ಜ್ವಾಲೆ

---

ಭಗವಾನ್ ಸೂರ್ಯನಾರಾಯಣನು ಅದೇ ಉದಯಿಸಿದ್ದನು. ಚಂದ್ರಪುರದ ಜನರು ತಮ್ಮ ತಮ್ಮ ಉದ್ಯೋಗಗಳಲ್ಲಿ ನಿರತರಾಗಿದ್ದರು. ದುರ್ಗಾಬಾಯಿಯು ಮನೋರಮೆಯ ಪ್ರಸ್ಥಾನವನ್ನು ಕಟ್ಟುವ ಸಂಭ್ರಮದಲ್ಲಿ ತೊಡಗಿದ್ದಳು. ವೃಕ್ಷಾಧಾರವು ತಪ್ಪಿದ ಲತೆಯಂತೆ ಮನೋರಮೆಯು ಒಂದು ಕಡೆ

ಯಲ್ಲಿ ಬಿದ್ದಿದ್ದಳು. ಮನೋಹರನು ಅವಳಿಗೆ ಕಡೆಯ ಮಾತನ್ನು ಹೇಳಿ ತನ್ನ ಕೋಣೆಯ ಕಿಡಕಿಯಲ್ಲಿ ಮುಖವಿಟ್ಟು ಉದಾಸೀನನಾಗಿ ನಿಂತುಕೊಂಡಿದ್ದನು. ಬಗೆಬಗೆಯ ವಿಚಾರತರಂಗಗಳ ಹೊಯ್ದಾಟದಿಂದ ಅವನು ದೇಹಭಾನವಿಲ್ಲದವನಾಗಿದ್ದನು. ಅಷ್ಟರಲ್ಲಿ ವನಿತೆಯು ಅವನ ಕೋಣೆಯಲ್ಲಿ ಬಂದು-" ಮನೂ ಅಣ್ಣಾ, ಏನು ನಡೆಸಿರುವೆ ? ಮನೋರಮೆಯು ಮನೆಯಲ್ಲಿದ್ದಂತೆ ಕಾಣುವದಿಲ್ಲವಲ್ಲ! ಎಲ್ಲಿ ಹೋಗಿರುವಳು!" ಎಂದು ಹೊರಗೆ ಬಂದು ಮೂಲೆಯಲ್ಲಿದ್ದ ಮನೋರಮೆಯನ್ನು ನೋಡದೆ ಕೇಳಿದಳು. ವನಿತೆಯನ್ನು ನೋಡಿದ ಕೂಡಲೆ ಮನೋಹರನಿಗೆ ಬ್ರಹ್ಮಾಂಡಕ್ಕೆ ಬೆಂಕಿ ಹತ್ತಿದಂತಾಯಿತು. ಅವಳ ಮಾತಿಗೆ ಪ್ರತ್ಯುತ್ತರವನ್ನು ಕೊಡುವಷ್ಟು ಶಾಂತಭಾವವು ಅವ್ರನಲ್ಲಿ ಉಳಿಯದ್ದರಿಂದ ಅವಳನ್ನು ಕ್ರೂರದೃಷ್ಟಿಯಿಂದ ನೋಡುತ್ತ ನಿಂತನು. ಅವನ ಉಗ್ರಮೂರ್ತಿಯನ್ನು ನೋಡಿ ವನಿತೆಯು ಮೆಟ್ಟಿಬಿದ್ದಳು. "ಅಣ್ಣಾ, ನನ್ನ ಮೇಲೆ ಕೋಪವನ್ನು ಮಾಡುವ ಕಾರಣವೇನು!" ಎಂದು ಅಂಜುತ್ತಂಜುತ್ತ ಅವಳು ಕೇಳಿದಳು. ಮನೋಹರನು ಅವಳನ್ನು ಸೂಕ್ಷ್ಮದೃಷ್ಟಿಯಿಂದೊಮ್ಮೆ ನೋಡಿದನು. ಅವನ ಮನಸ್ಸಿನಲ್ಲಿ ಏನೋ ಒಂದು ವಿಚಾರವು ಪಕ್ಕನೆ ಹೊಳೆಯಿತು. ಆಗ ಅವನು ಸೌಮ್ಯವಾಗಿ ವನಿತೆಯನ್ನು ಕುರಿತು-" ತಂಗೀ, ವನಿತಾ, ನಿನಗೊಂದು ಮಾತು ಕೇಳುತ್ತೇನೆ; ಒಡಹುಟ್ಟಿದವನಂತಿರುವ ನನ್ನ ಮುಂದೆ ಸತ್ಯವಾದ ಸಂಗತಿಯನ್ನು ಹೇಳುವೆಯಾ?" ಎಂದು ನುಡಿದು ಅವಳ ಉತ್ತರದ ಮಾರ್ಗಪ್ರತೀಕ್ಷೆ ಮಾಡಹತ್ತಿದನು. ಸಿಟ್ಟಾಗಿದ್ದ ಅಣ್ಣನು ಶಾಂತನಾದದ್ದನ್ನು ನೋಡಿ ವನಿತೆಗೆ ಸಂತೋಷವಾಯಿತು.

"ಅಣ್ಣಾ, ಅದಾವ ಮಾತು ? ನನಗೆ ಗೊತ್ತಿದ್ದರೆ ನಿಶ್ಚಯವಾಗಿ ಹೇಳುವೆನು." ಎಂದು ನುಡಿದು ವನಿತೆಯು-"ಅಣ್ಣಾ, ನನ್ನ ಮೇಲೆ ನೀನು ಸಿಟ್ಟಾದಂತೆ ತೋರುವದು. ನಾನು ಅಂಥ ತಪ್ಪನ್ನೇನು ಮಾಡಿರುವೆನು?"

"ವನಿತಾ, ನಿನ್ನ ಮೇಲೆ ನನ್ನ ಸಿಟ್ಟಿಲ್ಲ. ಇರಲಿ, ನಿನ್ನೆ ಸಾಯಂಕಾಲದಲ್ಲಿ ರಮೆಯು ನಿಮ್ಮ ಮನೆಗೆ ಹೂವೀಳ್ಯಕ್ಕೆ ಬಂದಿದ್ದಳಷ್ಟೇ ? ನೀನು ಸಂಜೆಯ ತನಕ ಅವಳ ಬಳಿಯಲ್ಲಿದ್ದೆಯೇನು ? ಚೆನ್ನಾಗಿ ನೆನಪಿನಲ್ಲಿ ತಂದು ಹೇಳು. ನಾನು ಕೇಳುವ ಮಾತಿನಲ್ಲಿ ಒಂದು ಮಹತ್ವವಾದ ಸಂಗತಿಯು ಹೊರಬೀಳತಕ್ಕದ್ದಿದೆ. ಒಂದು ಅಕ್ಷರವನ್ನೂ ಹುಸಿಯಾಡಕೂಡದು."

ಮನೋಹರನ ಮಾತನ್ನು ಕೇಳಿ ವನಿತೆಯು ಗೊಂದಲದಲ್ಲಿ ಬಿದ್ದಳು. ಅವಳು ಲಜ್ಜೆಯಿಂದ-"ಒಳ್ಳೆಯ ಮಹತ್ವದ ಸಂಗತಿಯನ್ನು ಕೇಳುತ್ತೀ ಬಿಡಪ್ಪಾ ನೀನು!" ಎಂದು ನಗುತ್ತ ನುಡಿದು-"ಮನೋರಮೆಯು ಅತ್ಯಾನೊಡನೆ ಮಾತಾ

ಡುತ್ತ ಕುಳಿತಿದ್ದಳು. ನಾನು ಉದ್ಯಾನದಲ್ಲಿ ತಿರುಗಾಡಲಿಕ್ಕೆ ಹೋಗಿದ್ದೆನು."

"ನೀನು ಉದ್ಯಾನದಲ್ಲಿ ಒಬ್ಬಳೇ ಇದ್ದೆಯೇನು?"

ಮನೋಹರನು ಹೀಗೆ ನುಡಿದ ಕೂಡಲೆ ಅವಳು ಕಿಡಿಕಿಯಲ್ಲಿ ನಿಂತು ತನ್ನ ಮನೆಯ ಉದ್ಯಾನದ ಕಡೆಗೆ ನೋಡಿದಳು. ಆಗ ಅವಳಿಗೆ ಮತ್ತಿಷ್ಟು ನಾಚಿಕೆಯಾದಂತಾಗಿ— "ನೀನು ಎಲ್ಲವನ್ನೂ ಕೇಳುವವನು. ಅವರೂ ಇದ್ದರು. ಈಗಾದರೂ ಆಯಿತೇ? ನಾವು ನಗುವದನ್ನೂ ಕೆಲೆಯುವದನ್ನೂ ಹುಡುಗಾಟಿಕೆಯಾಡುವದನ್ನೂ ನೀನು ಈ ಕಿಡಕಿಯೊಳಗಿಂದ ನೋಡಿರುವದರಿಂದ ನನಗೆ ಚೇಷ್ಟೆ ಮಾಡಬೇಕೆಂದು ಯೋಚಿಸಿರುವೆಯೇನು?"

ಅವಳ ಮಾತುಗಳನ್ನು ಕೇಳಿ ಮನೋಹರನಿಗೆ ಬಹಳೇ ಸಂತೋಷವಾಯಿತು. ಆವನು ತನ್ನ ಅವಿಚಾರವನ್ನು ನಿಂದಿಸಿಕೊಳ್ಳಹತ್ತಿದನು.

"ಈಗ ನೀನುಟ್ಟಿದ್ದ ಪತ್ತಲವನ್ನೇ ನಿನ್ನೆ ಉಟ್ಟಿದ್ದೆಯಲ್ಲವೇ?"

"ಹೌದು."

"ಇದು ಮನೋರಮೆಯ ಪತ್ತಲವಾಗಿ ಕಾಣುತ್ತದೆ?"

"ಹೌದು. ಅಕ್ಷಯ್ಯತೃತೀಯೆಯ ಹಬ್ಬವೆಂದು ದುರ್ಗಾಬಾಯಿಯು ವರು ಮನೋರಮೆಗೆ ಹೇಳಿ ನನಗಿದನ್ನು ಕೊಡಿಸಿದರು. ನನಗೆ ಪತ್ತಲವಿದ್ದಿಲ್ಲವಾದದರಿಂದ ಉಟ್ಟುಕೊಂಡೆನು. ಅಣ್ಣಾ, ಇದಕ್ಕೇಕೆ ಇಷ್ಟು ಆಲೋಚನೆ ಮಾಡುತ್ತೀ? ನಾನು ನಿನ್ನ ಹೆಂಡತಿಯ ಪತ್ತಲವನ್ನು ದಕ್ಕಾಗಿ ತೆಗೆದುಕೊಂಡಿಲ್ಲ!"

"ವನಿತಾ, ವಿಕಲ್ಪವನ್ನು ತಿಳಿದುಕೊಳ್ಳಬೇಡ." ಎಂದು ನುಡಿದವನೇ ಮನೋರಮೆಯ ಬಳಿಗೆ ಹೋಗಿ ಅವಳನ್ನೊಮ್ಮೆ ನಿರೀಕ್ಷಿಸಿ ಸಂಭ್ರಮದಿಂದ ಅವಳ ಕೈಯನ್ನು ಹಿಡಿದು ಕೋಣೆಯಲ್ಲಿ ಕರೆತಂದು—

"ರಮೇ, ನನ್ನಿಂದ ದೊಡ್ಡ ಪ್ರಮಾದವಾಯಿತು, ಕ್ಷಮಿಸು!" ಎಂದು ಅವಳನ್ನು ಆಲಿಂಗಿಸಿದನು. ಮನೋರಮೆಗೆ ಕಡು ಹರುಷವಾಯಿತು. ವನಿತೆಯು ಆ ವಿಚಿತ್ರವಾದ ದೃಶ್ಯವನ್ನು ನೋಡಿ ಬೆರಗಾಗಿ ಚಿತ್ರಪಟದೊಳಗಿನ ಗೊಂಬೆಯಂತೆ ತಟಸ್ಥಳಾಗಿ ನಿಂತಳು.

ಮನೋರಮೆಯೂ, ವನಿತೆಯೂ ಒಂದೇ ವಯಸ್ಸಿನವರು. ವರ್ಣ, ಮೈಕಟ್ಟು, ನಿಲುವಿಕೆ ಮೊದಲಾದವುಗಳಿಂದ ಅವರು ಒಬ್ಬರನ್ನೊಬ್ಬರು ಹೋಲುತ್ತಿದ್ದರು. ಅವರು ಒಡಹುಟ್ಟಿದವರಂತೆ ಅರಿಯದವರಿಗೆ ಕಾಣುತ್ತಿದ್ದರು.

ದುರ್ಗಾಬಾಯಿಯು ಸ್ವಾಭಾವಿಕವಾಗಿ ಗೋಪಾಲನ ಉಪವನದ ಕಡೆಗೆ ನೋಡುತ್ತ ನಿಂತಾಗ ಮನೋರಮೆಯೂ ಗೋಪಾಲನೂ ಅಲ್ಲಿರುವದು ದೃಷ್ಟಿಗೆ

ಬಿತ್ತು. ಅವರ ಪ್ರೇಮಲೀಲೆಗಳನ್ನು ನೋಡಿ ಬಹಳೇ ಸಂತಾಪಗೊಂಡು, ಮಂಗನಿಗೆ ತಿಳಿಸುವದಕ್ಕೆ ಆತುರಪಡುವಷ್ಟರಲ್ಲಿ ಅವಳಿಗೆ ಮತ್ತೆ ಏನು ತಿಳಿಯಿತೋ ಏನೋ! ಅವಳು ಮನೆಯಿಂದ ಹೊರಬಿದ್ದು ಉದ್ಯಾನದ ಹತ್ತರ ಹೋಗಿ ನೋಡಲು ಗೋಪಾಲನೊಡನೆ ಸರಸಸಲ್ಲಾಪಗಳನ್ನಾಡುವವಳು ಮನೋರಮೆಯಾಗಿರದೆ ವನಿತೆಯಾಗಿದ್ದಳು. ಅವಳು ಭಗ್ನಹೃದಯಳಾಗಿ ಪುನಃ ಕಿಡಕಿಯಲ್ಲಿ ಅವರನ್ನು ನಿರೀಕ್ಷಿಸುತ್ತ ನಿಂತಳು. ಆಗ ಅವಳು ಮನೋರಮೆಯಂತೆ ಅವಳಿಗೆ ಕಂಡಳು. ತಾನು ವನಿತೆಗೆ ಪತ್ತಲವನ್ನು ಕೊಡಿಸಿದ್ದರ ಫಲವು ದೊರೆಯಿತೆಂದು ಅವಳು ಹಿಗ್ಗಿದಳು. ಮನೋರಮೆಯನ್ನು ಹೋಲುತ್ತಿದ್ದ ವನಿತೆಯು ಅವಳ ಪತ್ತಲವನ್ನುಟ್ಟಿದ್ದರಿಂದ ಪ್ರತಿ ಮನೋರಮೆಯೇ ಆಗಿದ್ದಳು. ಈ ದೃಶ್ಯದ ಉಪಯೋಗವನ್ನು ದುರ್ಗಾಬಾಯಿಯು ಹೇಗೆ ಮಾಡಿಕೊಂಡಳೆಂಬದು ವಾಚಕ ಮಹಾಶಯರಿಗೆ ಗೊತ್ತೇ ಇದೆ.

ತಾಯಿಯ ದುಷ್ಟವ್ಯೂಹವು ಮನೋಹರನಿಗೆ ತಿಳಿಯಿತು. ನಿರಪರಾಧಿನಿಗೆ ವ್ಯರ್ಥವಾಗಿ ತಾಪವನ್ನು ಕೊಟ್ಟೆನೆಂದು ಅವನು ಪಶ್ಚಾತ್ತಾಪಬಟ್ಟನು. "ನಿಜವಾದ ಸಂಗತಿಯು ಹೊರಬೀಳದಿದ್ದರೆ ಮನೋರಮೆಯು ಸಾಯುವ ತನಕ ದುಃಖವನ್ನು ಭೋಗಿಸಬೇಕಾಗುತ್ತಿತ್ತು. ಗಂಡಸರಿಗೆ ಬುದ್ಧಿಯಿರುವದಿಲ್ಲವೆಂದು ಇದಕ್ಕೇ ಅನ್ನುತ್ತಾರೆ." ಎಂದು ವನಿತೆಯು ನುಡಿದಳು. "ವನಿತಾ, ನೀನೇ ದೇವರಾಗಿ ಬಂದು ನನ್ನ ಶುಭೋದಯವನ್ನು ಮಾಡಿದೆ." ಎಂದು ನುಡಿದು ಮನೋರಮೆಯು ಅವಳನ್ನು ಆಲಿಂಗಿಸಿದಳು. ಮನೋರಮೆಗಾದ ಆನಂದವನ್ನು ಎಷ್ಟೆಂದು ಬಣ್ಣಿಸಬೇಕು? ಬಹು ದಿವಸ ಕೈಬಿಟ್ಟು ಹೋಗಿದ್ದ ಸಾಮ್ರಾಜ್ಯಪದವು ದೊರೆತದ್ದಕ್ಕಿಂತಲೂ ಹೆಚ್ಚು ಆನಂದವು ಅವಳಿಗಾಯಿತೆಂದು ಒಂದೇ ಮಾತಿನಲ್ಲಿ ಹೇಳಿ ಬಿಡುವೆವು.

ಮನಸ್ಸಿನಲ್ಲಿಯ ಸೇಡು ತೀರಿಸಿಕೊಳ್ಳುವದಕ್ಕಾಗಿ ಸೌಜನ್ಯದ ವೇಷವನ್ನು ತಾಳಿಕೊಂಡು ಎಂದೂ ನಂಬಕೂಡದಂಥ ಭಯಂಕರವಾದ ಅಮಾನುಷಕೃತಿಯನ್ನು ಮಾಡಲುದ್ಯುಕ್ತಳಾದ ದುರ್ಗಾಬಾಯಿಯು ಸಮಾಚಾರವನ್ನು ತೆಗೆದುಕೊಳ್ಳಬೇಕೆಂದು ಮೂವರೂ ಕೋಣೆಯಿಂದ ಹೊರಬಿದ್ದು ನಡುಮನೆಯಲ್ಲಿ ಹೋಗಿ ನೋಡುತ್ತಾರೆ, ವಿಲಕ್ಷಣವಾದ ನೋಟವು ದೃಷ್ಟಿಗೋಚರವಾಯಿತು! ದುರ್ಗಾಬಾಯಿಯು ನೆಲದ ಮೇಲೆ ಸಂಕಟಬಡುತ್ತ ಉರುಳಾಡತೊಡಗಿದ್ದಳು!

ವನಿತೆಯಿಂದ ತನ್ನ ವ್ಯೂಹವು ಕೆಟ್ಟು ಹೋದದ್ದನ್ನು ಮರೆಗೆ ನಿಂತು ದುರ್ಗಾಬಾಯಿಯು ಕೇಳಿದ್ದಳು. ಇನ್ನು ಮೇಲೆ ಜನರಲ್ಲಿ ತನ್ನ ಮರ್ಯಾ

ದೆಯು ಉಳಿಯುದೆಂದೂ ತನ್ನನ್ನು ಮಗನು ನಂಬದೆ ಮನೆ ಬಿಡಿಸುವನೆಂದೂ ತಿಳಿದು ಜಾಜ್ವಲ್ಯಮಾನವಾದ ವಿಷವನ್ನು ಅವಳು ಕುಡಿದು ಬಿಟ್ಟಿದ್ದಳು! ಅವ ರನ್ನು ನೋಡಿ ದುರ್ಗಾಬಾಯಿಯು ಬಹಳೇ ಸಂತಾಪಗೊಂಡಳು. "ವನಿತೇ, ನೀನೇ ನನಗೆ ಮೃತ್ಯುವಾದೆ! ಈ ಹಂಚಿಕೆಯು ಸಾಧ್ಯವಾಗಿ ಮನೂನು ಇವ ಳನ್ನು ಮನೆ ಬಿಡಿಸಿದ್ದರೆ ನಾನು ವಿಷಪಾನ ಮಾಡುವದಕ್ಕೆ ಕಾರಣವಿದ್ದಿಲ್ಲ. ನನ್ನ ಮಾತುಗಳನ್ನು ಕೇಳದೆ ಮನೋಹರನು ಸುಮ್ಮನಿದ್ದುಬಿಟ್ಟಿದ್ದರೆ ಇವಳಿಗೆ ವಿಷ ಹಾಕಿ ಕೊಲ್ಲಬೇಕೆಂದು ವಿಚಾರಮಾಡಿದ್ದೆನು. ಆದರೆ ಏನು ಮಾಡಲಿ? ಈ ಶಟವಿಯ ದೈವವು ಚೆನ್ನಾಗಿದೆ. ನನ್ನ ಕಪಟತಂತ್ರವೆಲ್ಲ ಹೊರಬಿದ್ದು ಎಂದೂ ನಂಬಕೂಡದಂಥ ಭಯಂಕರವಾದ ಕೃತ್ಯದಿಂದ ಜನರಲ್ಲಿ ನನ್ನ ಅಪಕೀರ್ತಿಯು ಬೆಳೆಯಿತು. ಮಾನಹೀನಳಾಗಿರುವದಕ್ಕಿಂತ ಮರಣವು ಮೇಲೆಂದು ಆ ರಾಕ್ಷ ಸಿಗೆ ಮಿಸಲಾಗಿಟ್ಟ ಪ್ರಖರವಾದ ವಿಷವನ್ನು ಕುಡಿದಿರುವೆನು. ಪಿಶಾಚಿಯಾಗಿ ಯಾದರೂ ಈ ರಮೆಯ ಗೋಣನ್ನು ಮುರಿಯದಿರಲಾರೆನು."

"ಅಂತ್ಯಕಾಲಕ್ಕಾದರೂ ನಿರ್ಮಲಮನಸ್ಸಿನಿಂದ 'ರಾಮ ಕೃಷ್ಣ' ಎಂದು ದೇವರ ಸ್ಮರಣೆಯನ್ನು ಮಾಡಿರಿ. ಅಂದರೆ ಕೃತಕರ್ಮದ ಪ್ರಾಯಶ್ಚಿತ್ತವಾದಂ ತಾಗಿ ಪಾಪವು ತೊಳೆದು ಹೋಗುವದು."

"ನೀನು ನನಗೆ ಬ್ರಹ್ಮಜ್ಞಾನ ಹೇ......ಳ......"

ದುರ್ಗಾಬಾಯಿಯು ಬಾಯಿಂದ ಮುಂದಿನ ಮಾತುಗಳು ಹೊರಡದಾದವು. ನಾಲಿಗೆಯು ಸೆಳೆಯಹತ್ತಿತು. ಸೊಸೆಯನ್ನು ಕಂಡರೆ ಸೇರದೆ ಅನೇಕಪ್ರಕಾರ ವಾಗಿ ಪೀಡಿಸುತ್ತ ಅವಳ ಪ್ರಾಣಕ್ಕೆ ಮುಳುವಾಗಬೇಕೆಂದು ಹೊಂಚುಹಾಕಿಕೊಂ ಡಿದ್ದ ದುರ್ಗಾಬಾಯಿಗೆ ತನ್ನ ಸಾಹಸವೆಲ್ಲ ನಿಷ್ಫಲವಾದದರಿಂದ ಪಶ್ಚಾತ್ತಾಪ ವಾಯಿತು. ಆ ನರಪಿಶಾಚಿಯು ಬಾಯಿಯಿಂದ ಭಗವನ್ನಾಮಸ್ಮರಣೆಯು ಹೇಗೆ ಬರಬೇಕು?

ಎಷ್ಟು ಅಹಿತವನ್ನು ಬಗೆದಿದ್ದರೂ ಮನೋರಮೆಗೆ ಅತ್ತೆಯ ಈ ದುರ ವಸ್ಥೆಯನ್ನು ನೋಡಿ ಪರಮಾವಧಿ ವ್ಯಸನವಾಯಿತು. ಅವಳು ದುಃಖದಿಂದ ಕಣ್ಣೀರು ಸುರಿಸತೊಡಗಿದಳು.

ದುರ್ಗಾಬಾಯಿಯ ನಾಡಿಗಳು ನಿಂತವು. ನೋಡನೋಡುವಷ್ಟರಲ್ಲಿ ಅವಳ ಆತ್ಮವು ಜಡದೇಹವನ್ನು ತ್ಯಜಿಸಿ ಪಂಚಮಹಾಭೂತಗಳಲ್ಲಿ ಐಕ್ಯವಾಗಿ ಹೋಯಿತು!

---

೩

# ರಾಜಶೇಖರ

(೧)

ಪತಿಯ ಆಗಮನವನ್ನರಿತು ಅವನನ್ನೆದುರ್ಗೊಳ್ಳುವದಕ್ಕಾಗಿ ಪೂರ್ವ ದಿಗ್ವನಿತೆಯು ಮಂಗಲಕರವಾದ ಕುಂಕುಮದಿಂದ ಸ್ನಾನಮಾಡಿದಂತೆ ಪೂರ್ವ ದಿಗ್ಭಾಗವೆಲ್ಲವೂ ಕೆಂಬಣ್ಣದಿಂದ ಒಪ್ಪುತ್ತಿತ್ತು. ಮುಂಜಾವಿನ ಮಂದಮಾರುತನು ಆದೇ ವಿಕಾಸಹೊಂದುತ್ತಿರುವ ಪುಷ್ಪಗಳ ಸೌರಭವನ್ನು ಬೀರುತ್ತ ಆದೇ ಎದ್ದು ತಮ್ಮ ತಮ್ಮ ನಿತ್ಯಕೃತ್ಯಗಳನ್ನು ಮಾಡುತ್ತಿರುವ ಮಾನವರಲ್ಲಿ ನವಚೈತನ್ಯವನ್ನು ಉಂಟುಮಾಡತೊಡಗಿದ್ದನು. ಶೀತಲವಾಯುವಿನ ಸ್ಪರ್ಶದಿಂದ ಉತ್ಸಾಹಗೊಂಡ ಜನರು ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಹತ್ತಿದ್ದರು. ರಾತ್ರಿ ಎಂಬ ನಿಶಾಚರನ ಮುತ್ತಿಗೆಯಿಂದ ಪರಿತಪಿಸುತ್ತಿದ್ದ ಧರಣೀದೇವಿಯು ತನ್ನ ಸಂಕಟನಿವಾರಣಕ್ಕಾಗಿ ಸೂರ್ಯನಾರಾಯಣನನ್ನು ಪ್ರಾರ್ಥಿಸುತ್ತಿರುವಳೋ ಎಂಬಂತೆ ಪಕ್ಷಿಸಮುದಾಯವೆಲ್ಲವೂ ಮಂಜುಲಸ್ವರದಿಂದ ಕಿಲಕಿಲಾಟವನ್ನು ಮಾಡುತ್ತಿದ್ದವು. ಬರಬರುತ್ತ ಕೆಂಪು ಪ್ರಕಾಶವೆಲ್ಲವೂ ಲುಪ್ತವಾಯಿತು. ಕುಂಕುಮಸ್ನಾತೆಯಾದ ಪೂರ್ವದಿಗ್ವಧುವು ತನ್ನ ಪತಿಯೊಡನೆ ಏಕರೂಪತೆಯನ್ನು ಹೊಂದಿದಳು. ಬಾಲಾರ್ಕನು ಪ್ರತಿನಿತ್ಯದಂತೆ ಗಗನಾಂಗಣದಲ್ಲಿ ಪ್ರಾಪ್ತನಾದನು. ಅವನ ಬಾಲಕಿರಣಗಳು ಪ್ರತಿಯೊಬ್ಬನಲ್ಲಿಯೂ ಉತ್ಸಾಹವನ್ನುಂಟು ಮಾಡುತ್ತಿದ್ದವು. ಆದರೆ ಅಂತಹ ಭಾಸ್ಕರನಿಗಾದರೂ ನಿಂದೆಯು ತಪ್ಪಲಿಲ್ಲ. ಬಾಲಸೂರ್ಯನ ಕಿರಣಗಳು ಗವಾಕ್ಷದೊಳಗಿಂದ ಹಾಯ್ದು ಬರಲು, ಇನ್ನೂ ನಿದ್ದೆಗಣ್ಣೊಳಗಿದ್ದ ನವಯುವತಿಯರು ತಮ್ಮ ಪತಿಗಳ ಬಾಹುಪಾಶಕ್ಕೆ ಎರವಾಗಬೇಕಾಯಿತೆಂದು ಸೂರ್ಯನನ್ನು ನಿಂದಿಸದೆ ಬಿಡಲಿಲ್ಲ. ಆದರೇನು? ಮಹಾತ್ಮರು ಜನರ ಸ್ತೋತ್ರನಿಂದೆಗಳೆರಡಕ್ಕೂ ಕಿವಿಗೊಡದೆ ತಮ್ಮ ಕರ್ತವ್ಯವನ್ನು ಮಾಡುವುದರಲ್ಲಿ ತಪ್ಪುವದಿಲ್ಲ.

ಇಂತಹ ಮನೋಹರವಾದ ಪ್ರಾತಃಕಾಲದ ಸಮಯದಲ್ಲಿ ಧರ್ಮಪುರದ ಊರಹೊರಗಣ ವಿಶಾಲವಾದ ಬೈಲಿನಲ್ಲಿ ಆನಂದದ ಕೋಲಾಹಲವೆದ್ದಿದೆ. ಆ ವಿಶಾಲವಾದ ಬೈಲಿನ ಸುತ್ತಲೂ ನಾನಾತರದ ವೃಕ್ಷಗಳು ಗಗನಚುಂಬಿತವಾಗಿ

ಬೆಳೆದಿದ್ದವು. ಅದೇ ಉದಯಹೊಂದಿದ ಸೂರ್ಯನ ಕೆಂಪು ಕಿರಣಗಳು ಗಿಡಗಳ ಸಂದಿನೊಳಗಿಂದ ಹಾಯ್ದು ಬಂದು ಮನಸ್ಸಿಗೆ ಆಹ್ಲಾದವನ್ನುಂಟಮಾಡುತ್ತಿದ್ದವು. ಅಶ್ವಾರೋಹಿಗಳಿಂದಲೂ, ಕಾಲಾಳುಗಳಿಂದಲೂ, ಆ ಬೈಲೆಲ್ಲ ತುಂಬಿ ಹೋಗಿತ್ತು. ಅವರ ಆ ಸ್ವಚ್ಛಂದವೃತ್ತಿಯನ್ನು ನೋಡಿದರೆ ಕೇವಲ ವಿನೋದಾರ್ಥವಾಗಿ ವಿಹರಿಸುತ್ತಿರುವರೆಂಬುದು ತಿಳಿಯದೆ ಇರುತ್ತಿರಲಿಲ್ಲ. ತುಸು ಹೊತ್ತಿನಲ್ಲಿ ಅವರೆಲ್ಲರೂ ತಮ್ಮ ತಮ್ಮ ವಾಹನಗಳ ಮುಖವನ್ನು ಗ್ರಾಮದ ಕಡೆಗೆ ತಿರುಗಿಸಿದರು. ಅಶ್ವಾರೋಹಿಗಳೂ, ಕಾಲಾಳುಗಳೂ, ಗಂಭೀರ ಗತಿಯಿಂದ ಬರುತ್ತಿದ್ದರು. ಅವರಲ್ಲಿ ಎಲ್ಲಕ್ಕೂ ಮುಂಭಾಗದಲ್ಲಿ ಪವನಗತಿಯಿಂದ ಓಡುತ್ತಿರುವ ಎರಡು ಅಶ್ವಗಳು ಖುರಪುಟದಿಂದ ಭೂಮಿಯನ್ನು ಅಗಿಯುತ್ತ ಒಳ್ಳೆಯ ರಭಸದಿಂದ ಮಾರ್ಗವನ್ನು ಕ್ರಮಿಸಹತ್ತಿದ್ದವು. ಉನ್ನತವೂ, ಪುಷ್ಟವೂ, ಮನೋಹರವೂ, ಆದ ಕೃಷ್ಣವರ್ಣದ ಅಶ್ವದ್ವಯವು ಒಂದೇ ಜಾತಿಯದಿತ್ತು. ಅವುಗಳನ್ನಾರೋಹಿಸಿದ ರಾಹುತರಾದರೂ ತರುಣರೂ, ರೂಪಸಂಪನ್ನರೂ, ಉತ್ಸಾಹಿಗಳೂ ಆಗಿದ್ದರು. ಆದರೆ ಅವರ ಉಡಿಗೆತೊಡಿಗೆಗಳಿಂದಲೂ, ಮುಖಲಕ್ಷಣದ ಮೇಲಿಂದಲೂ ಅವರೀರ್ವರಲ್ಲಿ ಸೇವ್ಯಸೇವಕ ಭಾವವಿರಬಹುದೆಂದು ಸೂಕ್ಷ್ಮವಾಗಿ ನಿರೀಕ್ಷಿಸುವವರಿಗೆ ಗೊತ್ತಾಗದೆ ಇರುತ್ತಿರಲಿಲ್ಲ. ತಮ್ಮ ತಮ್ಮ ಕುದುರೆಗಳ ಚಾಪಲ್ಯದಿಂದ ಆರೋಹಿತರ ಉತ್ಸಾಹವು ದ್ವಿಗುಣಿತವಾಗಿ ವೇಗವನ್ನು ಮತ್ತಿಷ್ಟು ಹೆಚ್ಚಿಸಬೇಕೆಂದು ಅವರು ಹಾತೊರೆಯುತ್ತಿದ್ದರು. ನೋಡನೋಡುವಷ್ಟರಲ್ಲಿ ಆ ಅಶ್ವದ್ವಯವು ರಾಜಬೀದಿಯ ಮಧ್ಯಕ್ಕೆ ಬಂದು ತಲ್ಪಿತು. ಪಟ್ಟಣವಾಸಿಗಳ ಜನರು ಈ ಕೋಲಾಹಲವನ್ನು ನೋಡುವದಕ್ಕಾಗಿ ಕಟ್ಟೆಯ ಮೇಲೂ ಮಾಳಿಗೆಯ ಮೇಲೂ ನಿಂತುಕೊಂಡಿದ್ದರು. ಅಂತಃಪುರದ ಸ್ತ್ರೀಯರು ಸಹ ಆತುರಚಿತ್ತರಾಗಿ ಕಿಡಿಕಿಯಲ್ಲಿ ಮುಖವಿಟ್ಟು ಒಳ್ಳೆಯ ಕೌತುಕದಿಂದ ನೋಡತೊಡಗಿದ್ದರು. ಒಡೆಯನ ಉತ್ಸಾಹವರ್ಧಕ ಸೂಚನೆಯಿಂದ ಅಶ್ವಗಳೂ, ಅಶ್ವಗಳ ಚಾಪಲ್ಯದಿಂದ ರಾಹುತರೂ ಉತ್ಸಾಹದಿಂದ ಉನ್ಮತ್ತರಾಗಿದ್ದರು. ಕುದುರೆಗಳ ವೇಗವು ಮೊದಲಿಗಿಂತಲೂ ಅಧಿಕವಾಗಿತ್ತು. ರಾಯಬೀದಿಯ ಎಡಬಲದಲ್ಲಿ ನಿಂತ ಪ್ರೇಕ್ಷಕರು ಕುದುರೆಗಳ ಪವನಗತಿಯನ್ನೂ, ಆರೋಹಕರ ಧೈರ್ಯಚಾಪಲ್ಯಾದಿ ಗುಣಗಳನ್ನೂ ಮುಕ್ತಕಂಠವಾಗಿ ಹೊಗಳುತ್ತಿದ್ದರು. ಅಷ್ಟರಲ್ಲಿ ೫ ವರ್ಷದ ಬಾಲಕನೊಬ್ಬನು, ಬೀದಿಯಲ್ಲಿ ನಡೆದ ಕೋಲಾಹಲವನ್ನು ನೋಡುವದಕ್ಕೆಂದು ಓಡುತ್ತ ಓಡುತ್ತ ನಡುಬೀದಿಗೆ ಬಂದು ನಿಂತನು. ಅಶ್ವಾರೋಹಕರು ಒಡ

ನೆಯೇ ಕುದುರೆಗಳನ್ನು ನಿಲ್ಲಿಸಲು ಪ್ರಯತ್ನಿಸಿದರು. ಉನ್ಮತ್ತವಾದ ಕುದುರೆಗಳು ಕಡಿವಾಣವನ್ನು ಲೆಕ್ಕಿಸದೆ ಒಳ್ಳೆಯ ಭರದಿಂದ ಓಡತ್ತೊಡಗಿದ್ದವು. ಮುಂದಿನ ಕುದುರೆಯ ಕಾಲಲ್ಲಿ ಶಿಶುವು ಸಿಗುವಷ್ಟರಲ್ಲಿಯೇ ರಾವುತನು ಅತ್ಯಂತ ಚಾಪಲ್ಯದಿಂದ ತನ್ನ ಅಶ್ವವನ್ನು ಮೇಲಕ್ಕೆ ಹಾರಿಸಿದನು. ಕೂಡಲೇ ಕುದುರೆಯು ಆ ಬಾಲಕನನ್ನು ದಾಟಿ ಮುಂದೆ ಹೋಗಿಬಿಟ್ಟಿತು. ಅದರ ಹಿಂದೆಯೇ ಮತ್ತೊಂದು ಕುದುರೆ. ಆ ಕುದುರೆಯ ರಾವುತನು ತನ್ನ ಕುದುರೆಯನ್ನು ಹಾರಿಸುವದಕ್ಕೆ ಬಹಳವಾಗಿ ಯತ್ನಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಕುದುರೆಯ ಕ್ರೂರವಾದ ಖುರಗಳು ಬಾಲಕನ ಕೋಮಲವಾದ ಕೊರಳ ಮೇಲೆ ಬಿದ್ದವು. ಎಲ್ಲ ಕಡೆಯಲ್ಲಿಯೂ ಹಾಹಾಕಾರವೆದ್ದಿತು. ಬೀದಿಯು ರಕ್ತಮಯವಾಯಿತು. ಬಾಲಕನ ಕೋಮಲವಾದ ಮುಂಡವು ರುಂಡದಿಂದ ಬೇರೆಯಾಗಿ ಬಿದ್ದಿತು. ನೋಡುವವರೆಲ್ಲರ ಕಣ್ಣುಗಳೊಳಗಿಂದ ಅಶ್ರುಧಾರೆಗಳು ಪ್ರವಹಿಸಹತ್ತಿದವು. ತುಸು ಹೊತ್ತಿನಲ್ಲಿಯೇ ಅಲ್ಲಿ ಜನಸಮುದಾಯವು ನೆರೆಯಿತು. ಎಲ್ಲರೂ ಕಣ್ಣೀರ್ಗರೆದರು. ಅಶ್ವವಾಹಕರು ಈ ಭಯಾನಕ ಸ್ಥಿತಿಯನ್ನು ನೋಡಿ ತಮ್ಮ ಅಶ್ವಗಳನ್ನು ನಿಲ್ಲಿಸಲಿಕ್ಕೆ ಆದಷ್ಟು ಯತ್ನಿಸಿದರು. ಆದರೂ ಅವು ನಿಲ್ಲಲಿಲ್ಲ. ತುಸು ದೂರ ಹೋದ ಬಳಿಕ ಕುದುರೆಗಳ ವೇಗವು ಕಡಿಮೆಯಾಯಿತು. ಅಶ್ವಾರೋಹಕರು ಕುದುರೆಗಳನ್ನು ನಿಲ್ಲಿಸಿ ತಮ್ಮತಮ್ಮೊಳಗೆ ಆಲೋಚಿಸಿದರು. ಖಿನ್ನಮುದ್ರೆಯಿಂದ ಇಬ್ಬರೂ ನಡೆದ ಸಂಗತಿಯ ಅಂತಿಮಪರಿಣಾಮವನ್ನು ವಿಚಾರಿಸುತ್ತ ತಮ್ಮ ತಮ್ಮ ಗೃಹಗಳಿಗೆ ತೆರಳಿದರು. ತಮ್ಮ ಒಡೆಯನ ಈ ಔದಾಸೀನ್ಯವನ್ನು ನೋಡಿ ಹಿಂದೆ ಬರುತ್ತಿರುವ ಪರಿವಾರವೆಲ್ಲವೂ ಖಿನ್ನಮುದ್ರೆಯಿಂದ ತಮ್ಮ ತಮ್ಮ ಸ್ಥಳಗಳಿಗೆ ತೆರಳಿತು.

## (೨)

ಚೋಳವೆಂಬದೊಂದು ವಿಸ್ತಾರವಾದ ರಾಜ್ಯ. ಸತ್ಯೇಂದ್ರಚೋಳನೆಂಬವನು ಅದಕ್ಕೆ ಅಧಿಪತಿ. ಧರ್ಮಪುರವೇ ಅವನ ರಾಜಧಾನಿ. ಅವನ ಆ ವಿಸ್ತಾರವಾದ ರಾಜ್ಯದಲ್ಲಿ ಎಲ್ಲಿಯೂ ಅನ್ಯಾಯದ ಸುಳಿವೇ ಇದ್ದಿಲ್ಲ. ಕ್ಷಮಾಶೀಲತೆ, ಪರೋಪಕಾರ, ಶೌರ್ಯ, ನ್ಯಾಯನಿಷ್ಠುರತೆ ಮೊದಲಾದ ಗುಣಗಳಲ್ಲಿ ಚೋಳ ಭೂಪಾಲನನ್ನು ಸರಿಗಟ್ಟುವವರು ಆ ಕಾಲಕ್ಕೆ ಯಾರೂ ಇದ್ದಿಲ್ಲ. ಅವನಿಗೆ ಒಬ್ಬನೇ ಒಬ್ಬ ಮಗನು. ಅವನು ಅದೇ ತಾರುಣ್ಯವನದಲ್ಲಿ ಪ್ರವೇಶಿಸಿ

ದ್ದನು. ಶೌರ್ಯ, ಧೈರ್ಯ, ಧರ್ಮನಿಷ್ಠೆ ಮೊದಲಾದ ಗುಣಗಳಲ್ಲಿ ತಂದೆಯನ್ನು ಪರಿಗಟ್ಟುತ್ತಿದ್ದನು. ಅವನ ಹೆಸರು ರಾಜಶೇಖರ. ಅವನೇ ಯುವರಾಜನು. ಸತ್ಯೇಂದ್ರ ಚೋಳನ ವಿಶಾಲವಾದ ರಾಜ್ಯಕ್ಕೆ ಅವನೇ ಅಧಿಪತಿಯಾಗತಕ್ಕವನು. ಅರಸನಿಗೆ ಯೋಗ್ಯನಾದ ಪತಿವ್ರೋಹಿ ಎಂಬ ವೃದ್ಧನಾದ ಮಂತ್ರಿಯಿದ್ದನು. ಮಂತ್ರಿಗಾದರೂ ಒಬ್ಬನೇ ಒಬ್ಬ ಮಗ. ಅವನ ಹೆಸರು ಮಿತವಚನ. ರಾಜಶೇಖರನಿಗೂ ಇವನಿಗೂ ಬಾಲ್ಯದ ಸ್ನೇಹ. ಒಬ್ಬರನ್ನೊಬ್ಬರು ಅತಿಶಯವಾಗಿ ಪ್ರೀತಿಸುತ್ತಿದ್ದರು. ರಾಜನು ಸಿಂಧುದೇಶದಿಂದ ಅತ್ಯುತ್ತಮವಾದ ಎರಡು ಕುದುರೆಗಳನ್ನು ತರಿಸಿದ್ದನು. ಆ ನೂತನವಾದ ಅಶ್ವಗಳನ್ನೇರಿ ವಿಹರಿಸಬೇಕೆಂದು ರಾಜಪುತ್ರನ ಮನಸ್ಸಾಯಿತು. ತನ್ನ ಬಯಕೆಯನ್ನು ಈಡೇರಿಸಿಕೊಳ್ಳಬೇಕೆಂದು ಮಿತ್ರನಾದ ಮಿತವಚನನನ್ನು ಕರೆಯಿಸಿ ಅವನೊಡನೆ ಆಲೋಚನೆ ಮಾಡಹತ್ತಿದನು.

**ರಾಜಶೇಖರ**— ಮಿತ್ರಾ, ಸಿಂಧುದೇಶದಿಂದ ತರಿಸಿದ ನೂತನವಾದ ಅಶ್ವಗಳು ಅತ್ಯುತ್ತಮವಾಗಿರುತ್ತವೆ. ಆದದರಿಂದ ಅವುಗಳನ್ನಾರೋಹಿಸಿ ವಿಹರಿಸಬೇಕೆಂದು ಮನಸ್ಸಾಗಿದೆ.

**ಮಿತವಚನ**— ರಾಜಕುಮಾರನೇ, ನೂತನವಾಗಿ ತರಿಸಿದ ಅಶ್ವಗಳನ್ನು ಒಮ್ಮೆಲೆ ಆರೋಹಿಸುವದು ಯೋಗ್ಯವಲ್ಲವು. ಮೊದಲು ರಾಹುತರಿಂದ ಅವುಗಳ ಗುಣಾವಗುಣಗಳನ್ನು ಅರಿತ ಮೇಲೆ ಅವನ್ನಾರೋಹಿಸುವದು ವಿಹಿತವು. ಮೇಲಾಗಿ ಅಶ್ವದೇರಾಟದಲ್ಲಿ ನಮ್ಮಿಂದೇನಾದರೂ ಅಪರಾಧವು ಸಂಘಟಿಸಿದರೆ ಮಹಾರಾಜರು ಕೋಪಿಸಲಿಕ್ಕಿಲ್ಲವೇ ? ಭಕ್ತಜನರಿಂದ ಸಂಪಟಿತವಾದ ರಾಜಮಾರ್ಗದಲ್ಲಿ ನಮ್ಮ ತುರಗದೇರಾಟವು ಯೋಗ್ಯವಾಗಲಾರದು. ಆದದರಿಂದ ಯುಕ್ತಾಯುಕ್ತ ವಿಚಾರವನ್ನು ಮಾಡಿ ಈ ಕಾರ್ಯಕ್ಕೆ ಪ್ರವರ್ತಿಸಬೇಕೆಂದು ಬೇಡಿಕೊಳ್ಳುತ್ತೇನೆ.

**ರಾಜಶೇಖರ**— ಮಿತ್ರಾ, ನಿನ್ನ ಉಪದೇಶದಲ್ಲಿ ಅಷ್ಟೇನೂ ಮಹತ್ವವಿಲ್ಲ. ಮುಂದೆ ಏನೋ ಒಂದು ಹಾನಿಯು ಸಂಭವಿಸುವದೆಂಬ ಕಲ್ಪನೆಯಿಂದಲೇ ಇಚ್ಛಿತಕಾರ್ಯವನ್ನು ಮಾಡದಿರುವದು ಜಾಣತನವೆನಿಸಲಾರದು. ಸಮುದ್ರದ ದಂಡೆಯ ಮೇಲೆ ಮೋಡಗಳು ಗರ್ಜಿಸುವವೆಂದು ತಿಳಿದು, ಹಂಸಪಕ್ಷಿಗಳು ಸಮುದ್ರಕೇಳಿಯನ್ನು ಬಿಟ್ಟು ಬಿಡುವವೇ ? ಅಡವಿಯಲ್ಲಿ ಮುಳ್ಳುಗಳು ನಡುವವೆಂಬ ಭೀತಿಯಿಂದ ಆನೆಗಳು ವನಸಂಚಾರವನ್ನು ಬಿಟ್ಟು ಬಿಡುವವೇ ? ಮುಂದೆ ಒದಗಬಹುದಾದ ವಿಘ್ನಗಳನ್ನು ಈಗಲೇ ಕಲ್ಪಿಸಿಕೊಂಡು, ಕಾರ್ಯಕ್ಕೆ ಕೈಹಾಕ

ದಿರುವದು ಮೂರ್ಖತನದ ಲಕ್ಷಣವು. ಸುಮ್ಮನೆ ಅನಿಷ್ಟಕರವಾದ ಯೋಚನೆ ಯನ್ನು ಮನದಲ್ಲಿ ತಂದು ನನ್ನ ಉಲ್ಲಾಸಕ್ಕೆ ವಿಘ್ನಕಾರಿಯಾಗಬೇಡ.

**ಮಿತವಚನ—** ಯುವರಾಜನೇ, ನಿನ್ನ ಆಜ್ಞೆಯಂತೆ ನಡೆಯುವದೇ ನನ್ನ ಕರ್ತವ್ಯವು. ಆದರೂ ನನಗೆ ತಿಳಿದಮಟ್ಟಿಗೆ ಹಿತಾಹಿತದ ವಿಚಾರವನ್ನು ನಿನಗೆ ಹೇಳದಿರಲಾರೆನು. ಶರಣಜನರಿಂದ ಆವೃತವಾದ ರಾಜಬೀದಿಯಲ್ಲಿ ನಮ್ಮಿಂದ ಏನಾದರೂ ಅನರ್ಥವು ಸಂಘಟಿಸಿದರೆ ಬಹಳ ಸಂಕಟಕ್ಕೊಳಗಾಗಬೇಕಾದೀತು. ಧರ್ಮಾತ್ಮನಾದ ಮಹಾರಾಜನು ಮಗನ ತಪ್ಪೆಂದು ಕ್ಷಮಿಸಬಲ್ಲನೇ ? ಆದದರಿಂದ ಮೊದಲೇ ವಿಚಾರಿಸುವದು ಒಳ್ಳೆಯದು.

**ರಾಜಶೇಖರ—** ಮಿತ್ರಾ, ಅವರವರ ಕರ್ಮಾನುಸಾರವಾಗಿ ಅವರವರಿಗೆ ಅನಿಷ್ಟಗಳು ಒದಗಿಯೇ ಒದಗುತ್ತವೆ. ಬೇಕಾದ ಯುಕ್ತಿಪ್ರಯುಕ್ತಿಗಳನ್ನು ಮಾಡಿದರೂ ಅವುಗಳನ್ನು ತಪ್ಪಿಸುವದಾಗದು. ನಮ್ಮ ಮೇಲೆ ಅಂಥ ದುರ್ಧರ ವಾದ ಪ್ರಸಂಗವು ಬಂದರೆ ಅದರಿಂದ ಪಾರುಮಾಡಲಿಕ್ಕೆ ಪರಮೇಶ್ವರನು ಸಮ ರ್ಥನಿರುವನು. ಆದದರಿಂದ ಬೇರೆ ವಿಚಾರವನ್ನೇ ಮಾಡಬೇಡ. ಈ ವೈಹಾಳಿಯಲ್ಲಿ ನಿನ್ನಿಂದಲೇ ಏನಾದರೂ ಅಪರಾಧವು ಸಂಘಟಿಸಿದರೂ ಅದು ನನ್ನ ಅಪರಾಧ ವೆಂದು ತಿಳಿಯುತ್ತೇನೆ. ಹೆಚ್ಚಿನ ವಿಚಾರವನ್ನು ಮಾಡಿ ಕಾಲಹರಣ ಮಾಡಬೇಡ ತೀವ್ರದಿಂದ ಸಿದ್ಧನಾಗು.

**ಮಿತವಚನ—** ಯುವರಾಜನೇ, ನಿನ್ನ ಇಚ್ಛೆಯು ಇಷ್ಟು ಪ್ರಬಲವಾ ಗಿದ್ದ ಮೇಲೆ ನಾನೇಕೆ ವಿಘ್ನವನ್ನು ಮಾಡಲಿ? ಮುಂದೆ ಒದಗತಕ್ಕ ಕಷ್ಟಗಳನ್ನು ಭೋಗಿಸಲಿಕ್ಕೆ ಸಿದ್ಧರಾದರಾಯಿತು.ನಿನ್ನಅಪ್ಪಣೆಯಂತೆನಡೆಯಲು ಸಿದ್ಧನಿರುವೆನು.

ಒಡೆಯನ ಮನಸ್ಸನ್ನು ನೋಯಿಸಲಾರದೆ ಮಿತವಚನನು ಸಿದ್ಧನಾದನು. ಈರ್ವರೂ ವಸ್ತ್ರಾಲಂಕಾರಗಳಿಂದ ಭೂಷಿತರಾಗಿ, ಪ್ರಾತಃಕಾಲದ ಆನಂದದಾಯ ಕವಾದ ಸಮಯದಲ್ಲಿ ಚತುರಂಗಬಲಸಮೇತವಾಗಿ ನಗರದ ಬಹಿರ್ಭಾಗದಲ್ಲಿ ಮನಸೋಕ್ತವಾಗಿ ವಿಹರಿಸಿ ತಿರುಗಿ ಪುರಪ್ರವೇಶಮಾಡುವ ಸಮಯದಲ್ಲಿ, ಉನ್ಮ ತ್ತವಾದ ಆ ಅಶ್ವಗಳು ಒಡೆಯನ ಇಚ್ಛೆಗೆ ವಿಧೇಯವಾಗದೆ ಅತಿವೇಗದಿಂದ ಬರುತ್ತಿರಲು, ರಾಜಮಾರ್ಗದಲ್ಲಿ ಐದು ವರ್ಷದ ಬಾಲಕನು ಮಿತವಚನನ ಕುದು ರೆಯ ಕಾಲಲ್ಲಿ ಬಿದ್ದು ಮಡಿದನು. ಹಿಂದಿನ ಪ್ರಕರಣದಲ್ಲಿ ಹೇಳಿದ ಸವಾರರಲ್ಲಿ ಮುಂದಿನ ರಾಹುತನು ರಾಜಶೇಖರನೆಂತಲೂ ಹಿಂದಿನ ರಾಹುತನು ಮಿತವಚನ ನೆಂತಲೂ ಬೇರೆ ಹೇಳಬೇಕಾದ ಅವಶ್ಯವಿಲ್ಲ.

(೩)

ವಿಸ್ತೀರ್ಣವಾದ ಸಭಾಮಂದಿರವು. ಎಲ್ಲೆಡೆಯಲ್ಲಿಯೂ ನಯನಮೋಹಕವಾದ ವಸ್ತುಗಳನ್ನು ಸುವ್ಯವಸ್ಥೆಯಿಂದ ಇರಿಸಿದುದರಿಂದ ನೋಡಿದೊಡನೆಯೇ ಪ್ರೇಕ್ಷಕರ ಮನಸ್ಸು ತಲ್ಲೀನವಾಗಿ ಹೋಗುತ್ತಿತ್ತು. ಸುತ್ತಲೂ ಹಲವು ಆಸನಗಳನ್ನು ವ್ಯವಸ್ಥೆಯಿಂದ ಇರಿಸಿದ್ದರು. ಸಭಾಗೃಹದ ಮಧ್ಯಭಾಗದಲ್ಲೊಂದು ರತ್ನಖಚಿತವಾದ ಸಿಂಹಾಸನವು ಇಡಲ್ಪಟ್ಟಿತ್ತು. ಮಾಂಡಲಿಕರಾಜರೂ ಸರದಾರರೂ ಬಂದು ತಮ್ಮ ತಮ್ಮ ಆಸನದಲ್ಲಿ ವಿಶ್ರಮಿಸಿದ್ದರು. ಸಭೆಯೆಲ್ಲವೂ ನೀರವವಾಗಿದ್ದಿತು. ಅಷ್ಟರಲ್ಲಿ ರಾಜನ ಆಗಮನಸೂಚಕವಾದ ವಂದಿಗಳ ಕೋಲಾಹಲವೆದ್ದಿತು. ನೃಪಶ್ರೇಷ್ಠನಾದ ಸತ್ಯೇಂದ್ರಚೋಳನು, ನಿಂತಿರುವ ಜನರನ್ನು ತನ್ನ ಕೃಪಾದೃಷ್ಟಿಯಿಂದವಲೋಕಿಸುತ್ತ, ವಂದಿಸುತ್ತಿರುವ ಪ್ರಜೆಗಳ ವಂದನೆಯನ್ನು ಕೈಕೊಳ್ಳುತ್ತ ಗಂಭೀರಗತಿಯಿಂದ ಆಸ್ಥಾನವನ್ನು ಪ್ರವೇಶಿಸಿ ಸಿಂಹಾಸನದಲ್ಲಿ ಕುಳಿತನು. ದರಬಾರದ ಪದ್ಧತಿಯಂತೆ ಎಲ್ಲರೂ ರಾಜನಿಗೆ ವಂದನೆಗಳನ್ನರ್ಪಿಸಿ ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ತುಸು ಹೊತ್ತು ಸಭೆಯು ಸ್ತಬ್ಧವಾಗಿದ್ದಿತು. ಅಷ್ಟರಲ್ಲಿ ಹೊರಗಿನಿಂದ ಅತ್ಯಂತವಾಗಿ ಶೋಕಿಸುವ ಸ್ತ್ರೀಯ ಕಂಠಸ್ವರವು ಸಭಿಕರ ಕರ್ಣಕುಹರವನ್ನು ಪ್ರವೇಶಿಸಿತು. ಎಲ್ಲರೂ ಲಕ್ಷ್ಯಪೂರ್ವಕವಾಗಿ ಆ ಶೋಕಾಲಾಪವನ್ನು ಕೇಳಹತ್ತಿದರು. ಬರುಬರುತ್ತ ಆ ಶೋಕರವದ ಪ್ರತಿಯೊಂದು ಶಬ್ದವೂ ಸ್ಪಷ್ಟವಾಗಿ ಕೇಳಿಸಹತ್ತಿತು "ಹಾಯ್! ಹಾಯ್! ಕುಮಾರಾ, ನಿನ್ನೀ ಅವಸ್ಥೆಯನ್ನು ನೋಡಿ ನಾನು ಹ್ಯಾಗೆ ಸೈರಿಸಲಿ? ಮಗನೇ, ದೇಹದಿಂದ ಬೇರೆಯಾದ ನಿನ್ನ ಈ ಮೊಗವನ್ನು ನೋಡುವದಕ್ಕಿಂತಲೂ ಮೊದಲೇ ನನ್ನ ಪ್ರಾಣವು ಯಾಕೆ ಹೋಗಿರಲಿಕ್ಕಿಲ್ಲ? ರಾಜಕುಮಾರರ ಅಶ್ವದೇರಾಟದ ಬಲಿಗೋಸ್ಕರವಾಗಿ ನಾನು ನಿನ್ನನು ಹೆತ್ತೆನೇ? ನಿನಗಿಂತಲೂ ಮೊದಲು ಮಡಿದ ಆರು ಮಂದಿ ಮಕ್ಕಳ ಶೋಕವನ್ನೂ, ಪತಿವಿಯೋಗದ ದುಃಖವನ್ನೂ ನಿನ್ನ ಸುಂದರವಾದ ಮುಖವನ್ನು ನೋಡಿ ಮರೆತು ಬಿಟ್ಟಿದ್ದೆನಲ್ಲ! ಹಿಂದಿನ ದುಃಖದ ಸ್ಮರಣೆಯಿಂದ ಮೈಮರೆತು ಕುಳಿತಾಗ ನಿನ್ನ ಮಧುರವಾದ ಕಂಠದಿಂದ ಹೊರಟ 'ಅವ್ವಾ!' ಎಂಬ ಧ್ವನಿಯು ಕಿವಿಗೆ ಬಿದ್ದಕೂಡಲೆ ನನ್ನ ಎಲ್ಲ ದುಃಖಗಳು ಮಾಯವಾಗಿ ಹೋಗುತ್ತಿದ್ದವು. ಇನ್ನು ನನ್ನ ಶೋಕನಿವಾರಣೆಯ ಉಪಾಯವೇನು? ಯಾರ ಮೊಗವನ್ನು ನೋಡಿ ದೇಹಧಾರಣೆಮಾಡಲಿ! ಯಾರ ವಚನವನ್ನು ಕೇಳಿ ಜೀವಿಸಲಿ! ಇಂದಿಗೆ ಈ ಜಗತ್ತೆಲ್ಲವೂ ನನಗೆ ಅಂಧಃಕಾರವಾಗಿ ಹೋಗಿದೆ. ಹಾಯ್! ಹಾಯ್! ಮಗನೇ, ಕ್ರೂರ

ವಾದ ಕುದುರೆಗಳ ಖುರದ ಪೆಟ್ಟಿನಿಂದ ನೀನೆಷ್ಟು ವೇದನೆಯನ್ನನುಭವಿಸಿರಬಹುದು! ಆ ವೇದನೆಯನ್ನು ತಾಳಲಾರದೆ ನನ್ನನ್ನೆಷ್ಟು ಬಾರಿ ಕೂಗಿರಬಹುದು! ಆದರೆ ದುರ ದೃಷ್ಟಳಾದ ನಾನು ನಿನ್ನ ಅಂತಿಮಕಾಲದ ಕರುಣಾವಾಣಿಯನ್ನು ಸಹ ಕೇಳಲಿಲ್ಲ ವಲ್ಲ! ನನ್ನ ಈ ದುಃಖವನ್ನು ಯಾರಿಗೆ ಹೇಳಲಿ ? ಯಾರು ನನ್ನ ದುಃಖ ನಿವಾರಣೆಯನ್ನು ಮಾಡಬಲ್ಲರು? ದೇವಾ ಅನಾಥನಾಥಾ ಕೃಪಾಕರಾ ನಿನ್ನ ಈ ಕೃಪಾಕರನೆಂಬ ಬಿರುದನ್ನು ಇಂದು ಬಿಸುಟುಬಿಡು. ನೀನು ನಿಜವಾಗಿಯೂ ಕೃಪಾ ಕರನಾಗಿದ್ದರೆ ನನ್ನ ಮುದ್ದುಮಗನ ಜೀವವನ್ನಪಹರಿಸುತ್ತಿದ್ದೆಯಾ ? ನಿನ್ನ ವಚನ ವನ್ನೇ ನಂಬಿ, ನಿನ್ನ ಸೇವೆಯಲ್ಲಿ ಕಾಲಕಳೆಯುತ್ತಿರುವ ನನಗೆ ಈ ಅವಸ್ಥೆಯನ್ನು ಕೊಡುವದು ನಿನ್ನ ಕೃಪಾಕರತ್ವಕ್ಕೆ ಒಪ್ಪುವದೇ ? ಅಂಧಳಾದ ವೃದ್ಧಳನ್ನು ಅರಣ್ಯ ಮಧ್ಯಕ್ಕೆ ಕರೆದುಕೊಂಡು ಹೋಗಿ ಕೈಯೊಳಗಿನ ಊರುಗೋಲನ್ನು ಕಸಿದು ಕೊಂಡಂತೆ ಮಾಡಿ ಬಿಟ್ಟೆಯಲ್ಲ! ನನ್ನ ಪತಿಯ ವಂಶವೃಕ್ಷವು ಇಂದಿಗೆ ಕಮರಿ ಹೋಯಿತೇ? ನನ್ನ ಈ ದುಃಖವನ್ನು ಯಾರ ಮುಂದೆ ಹೇಳಲಿ ? ಧರ್ಮಾತ್ಮ ನಾದ ಭೂಪಾಲನೇ, ಧರ್ಮನಿರತನೆಂದೂ ಸತ್ಯವಾದಿಯೆಂದೂ ಹೆಸರುಗೊಂಡ ನೀನು ನನ್ನ ಶೋಕವನ್ನು ಕೇಳುವದಿಲ್ಲವೇ? " ಎಂಬ ಕಲ್ಲನ್ನು ಸಹ ಕರಗಿಸುವ ಶೋಕಮಯ ಶಬ್ದಗಳು ರಾಜನ ಕಿವಿಗೆ ಬಿದ್ದವು. ಕೂಡಲೇ ಶೋಕಿಸುವವ ಳನ್ನು ಕರೆತರುವದಕ್ಕಾಗಿ ದೂತನನ್ನು ಕಳಿಸಿದನು. ಆಗ ಒಂದು ಕೈಯ್ಯಲ್ಲಿ ರಕ್ತವು ಸೋರುತ್ತಿದ್ದ ಬಾಲಕನ ತಲೆಯನ್ನೂ ಮತ್ತೊಂದು ಕೈಯಲ್ಲಿ ಬಾಲಕನ ಕಬಂಧವನ್ನೂ ಹಿಡಿದುಕೊಂಡು ಶೋಕಿಸುತ್ತಿರುವ ವೃದ್ಧಸ್ತ್ರೀಯು ಪ್ರವೇಶಿಸಿ ದಳು. ಆ ದೃಶ್ಯವನ್ನು ನೋಡಿಯೂ, ಅವಳ ಆ ಶೋಕಾಲಾಪವನ್ನು ಕೇಳಿಯೂ ಸಭಿಕರ ಕಣ್ಣುಗಳೊಳಗಿಂದ ಅವಿರಳವಾಗಿ ಅಶ್ರುಧಾರೆಗಳುದಿರಹತ್ತಿದವು. ರಾಜನೂ ತುಸು ಹೊತ್ತು ಚಿಂತಾಶೋಕದಿಂದ ಸ್ತಬ್ಧನಾಗಿದ್ದ ಆ ಮೇಲೆ ಆ ಸ್ತ್ರೀಯನ್ನುದ್ದೇಶಿಸಿ—

**ರಾಜ**— ತಾಯೀ, ನೀನು ಯಾರು ? ಈ ಮೃತಬಾಲಕನನ್ನು ತೆಗೆದು ಕೊಂಡು ರಾಜಾಸ್ಥಾನಕ್ಕೆ ಬರಲು ಕಾರಣವೇನು ? ಈ ಬಾಲಕನನ್ನು ಈ ಅವ ಸ್ಥೆಗೆ ಈಡುಮಾಡಿದ ಪಾಪಾತ್ಮನಾರು ? ಇದೆಲ್ಲವನ್ನೂ ಸ್ಪಷ್ಟವಾಗಿ ಹೇಳು. ಆ ಮೇಲೆ ಅದಕ್ಕೆ ತಕ್ಕ ಪ್ರತೀಕಾರವನ್ನು ಮಾಡುವೆವು. ಶೋಕವನ್ನು ಕಡಿಮೆ ಮಾಡಿ ನಿನ್ನ ಚರಿತ್ರವೆಲ್ಲವನ್ನು ಮೊದಲು ಹೇಳು.

**ತಿರುಕೊಳ ವಿನಾಚಿ**— ರಾಜೇಶ್ವರನೇ, ನನ್ನಂಥ ನಿರ್ಭಾಗ್ಯಳ ಚರಿತ್ರ ಶ್ರವಣದಿಂದ ಕೋಮಲಹೃದಯರಾದ ನಿಮಗೆ ಶೋಕವೇ ಆಗುವದಲ್ಲದೆ ಬೇರೆಯಿಲ್ಲ. ಆದರೂ ರಾಜಾಜ್ಞೆಯಂತೆ ವರ್ತಿಸಬೇಕಾದದರಿಂದ ಹೇಳುತ್ತೇನೆ ಕೇಳಿರಿ. ರಾಜೇಂದ್ರನೇ, ನಿನ್ನ ಈ ವಿಶಾಲವಾದ ರಾಜಧಾನಿಯಲ್ಲಿ ವ್ಯಾಪಾರ ಮಾಡುತ್ತಿದ್ದ ರವಿನಾಮಕ ವಣಿಕ್ ಶ್ರೇಷ್ಠನು ನನ್ನ ಪತಿಯಾಗಿದ್ದನು. ತನ್ನ ವ್ಯಾಪಾರದಿಂದ ವಿಪುಲ ಧನ ಸಂಚಯಮಾಡಿದ್ದರಿಂದ ನಾವೆಲ್ಲರೂ ಸುಖವಾಗಿರುತ್ತಿದ್ದೆವು. ಆದರೆ ನನ್ನ ದುರ್ದೈವದಿಂದ ನನ್ನ ಪತಿಯು ಮನಸ್ಸಿನಲ್ಲಿ ಹೆಚ್ಚು ಹಣ ಸಂಪಾದಿಸಬೇಕೆಂದು ಹುಟ್ಟಿ ಎಲ್ಲ ಧನವನ್ನು ತೆಗೆದುಕೊಂಡು ಸಮುದ್ರ ಮಾರ್ಗವಾಗಿ ವ್ಯಾಪರಕ್ಕಾಗಿ ಬೇರೆ ದೇಶಕ್ಕೆ ಹೋಗುತ್ತಿದ್ದನು. ದಾರಿಯಲ್ಲಿ ಬಿರುಗಾಳಿಯ ಹೊಡೆತಕ್ಕೆ ಸಿಕ್ಕ ನನ್ನ ಪತಿಯ ಹಡಗವು ಮುಳುಗಲು, ಅದರ ಸಂಗಡ ನನ್ನ ಪತಿಯು ಅಗಾಧವಾದ ಜೀವನರಾಶಿಯಲ್ಲಿ ತನ್ನ ಜೀವನವನ್ನು ವಿಸರ್ಜಿಸಿದನು.

ಅಂದು ಮೊದಲ್ಗೊಂಡು ನನ್ನ ದುಃಖಕ್ಕೆ ಪ್ರಾರಂಭವಾಯಿತು. ನನ್ನಲ್ಲಿರುವ ಧನವೆಲ್ಲವೂ ಹೋಗಿ ನಾನು ಕೇವಲ ದರಿದ್ರಳಾದೆನು. ಪತಿವಿರಹಿತೆಯಾದ ನನಗೆ ಆರುಮಂದಿ ಮಕ್ಕಳಿದ್ದರು. ಮತ್ತು ನನ್ನ ಉದರದಲ್ಲಿ ಮೂರು ತಿಂಗಳ ಗರ್ಭವಿದ್ದಿತು. ಭ್ರೂಣಹತ್ಯಾಪಾತಕದ ಭೀತಿಯಿಂದ ಆತ್ಮಹತ್ಯವನ್ನು ಮಾಡಿಕೊಳ್ಳಲಿಲ್ಲ. ಆರುಮಂದಿ ಮಕ್ಕಳ ಮೋರೆಯನ್ನು ನೋಡಿ ಸೌಖ್ಯಪಡುತ್ತಿದ್ದೆನು ಆದರೆ ವಿಧಿಯು ಈ ಸ್ಥಿತಿಯಲ್ಲಿಯೂ ನನ್ನನ್ನು ಇರಗೊಡಲಿಲ್ಲ. ನನ್ನ ಆರುಮಂದಿ ಮಕ್ಕಳೂ ಆರು ತಿಂಗಳಲ್ಲಿಯೇ ಮೃತಿಹೊಂದಿದರು. ಆಗಂತೂ ದುಃಖವ ಪರಮಾವಧಿಯಾಯಿತು. ದುಃಖಾತಿರೇಕದಿಂದ ಮೈಮೇಲಿನ ಎಚ್ಚರದಪ್ಪಿತು. ನಾನು ಮೂರ್ಛಿತಸ್ಥಿತಿಯಲ್ಲಿದ್ದಾಗ ನನ್ನ ಕುಲಸ್ವಾಮಿಯಾದ ಪರಮೇಶ್ವರನು ಬಂದು ನನ್ನನ್ನು ಸಂತಯಿಸಿ ನಿನ್ನ ಗರ್ಭದಿಂದ ಹುಟ್ಟುತಕ್ಕ ಮಗನಿಂದ ನೀನು ಇಹಪರಲೋಕಗಳ ಸುಖವನ್ನು ಪಡೆಯುವೆ; ಚಿಂತೆಮಾಡಬೇಡೆಂದು ಅಭಯವಚನವನ್ನು ಕೊಟ್ಟು ಮಾಯವಾದನು; ಆ ಪರಮೇಶ್ವರನ ಮಾತನ್ನು ನೆರೆನಂಬಿ ದುಃಖವನ್ನು ಬಿಟ್ಟು ಕಾಲಕಳೆಯುತ್ತಿರಲು, ಈಶ್ವರನ ವರಪ್ರಸಾದದಿಂದ ಈ ಬಾಲಕನು ಜನಿಸಿದನು. ಅವನಿಗೆ ಶಂಕರನೆಂದು ನಾಮವನ್ನಿಟ್ಟು ಬಲು ಅಕ್ಕರತೆಯಿಂದ ಜೋಕೆಮಾಡುತ್ತಿದ್ದೆನು.

ಆದರೆ ರಾಜೇಂದ್ರನೇ, ಈ ಹೊತ್ತು ನಿನ್ನ ಕುಮಾರನೂ ಮಂತ್ರಿತನಯನೂ ಕೂಡಿ ಕುದುರೆಯನ್ನೇರಿ ಬರುತ್ತಿರುವಾಗ ಅವರ ಕುದುರೆಗಳ ಖುರಹತಿಯಿಂದ

ನನ್ನ ಈ ಮೋಹದ ಕುಮಾರನ ಪ್ರಾಣಾಪಹರಣವಾಯಿತು. ಪರಮೇಶ್ವರನು ನನಗೆ ಕೊಟ್ಟ ಆಶ್ವಾಸನದಂತೆ ಈ ಮಗನಿಂದ ಇಹಪರಗಳಲ್ಲಿ ಸೌಖ್ಯಪಡೆಯ ಬೇಕೆಂದು ಯೋಚಿಸಿದ್ದೆನಲ್ಲದೆ, ಕುದುರೆಯ ಕಾಲಲ್ಲಿ ಸಿಕ್ಕು ಸಾಯುವನೆಂದು ಸ್ವಪ್ನದಲ್ಲಿಯೂ ಯೋಚಿಸಿರಲಿಲ್ಲ! ಧರ್ಮಾತ್ಮನಾದ ರಾಜೇಂದ್ರನೇ, ನಿನ್ನ ಧರ್ಮದ ಪ್ರಭಾವದಿಂದ ನನ್ನ ಇಹಪರಲೋಕಸಾಧಕನಾದ ಮಗನನ್ನು ಬದು ಕಿಸಿಕೊಡಬೇಕೆಂದು ಬೇಡಿಕೊಳ್ಳುತ್ತೇನೆ.

ಶೋಕರಸಪರಿಪೂರ್ಣವಾದ ಅವಳ ಚರಿತ್ರವನ್ನು ಕೇಳಿ ಸಭಿಕರೆಲ್ಲರೂ ಕಳವಳಗೊಂಡರು. ರಾಜನೂ ಚಿಂತೆ, ಶೋಕ, ಭಯ ಮೊದಲಾದ ಮನೋವಿ ಕಾರದಿಂದ ಕೆಲಹೊತ್ತು ಸ್ತಬ್ಧನಾಗಿ ಕುಳಿತು ಬಿಟ್ಟನು.

(೪)

ತುಸು ಹೊತ್ತಿನಲ್ಲಿ ರಾಜನು ಸ್ಥಿರಚಿತ್ತನಾದನು. ತನ್ನ ಕರ್ತವ್ಯವನ್ನು ಜ್ಞಾಪಿಸಿಕೊಂಡನು. ಕೂಡಲೇ ಅಪರಾಧಿಗಳಿಬ್ಬರನ್ನೂ ಕರೆತರುವಂತೆ ಆಜ್ಞಾ ಪಿಸಿದನು. ದೂತನು, ರಾಜಶೇಖರ ಮಿತವಚನರನ್ನು ಕರೆತಂದು ರಾಜಾಸ್ಥಾನ ದಲ್ಲಿ ನಿಲ್ಲಿಸಿದನು. ರಾಜನು ತಮ್ಮ ಅಪರಾಧವನ್ನರಿತಿರುವನೆಂದು ಅಪರಾಧಿಗ ಳಿಬ್ಬರೂ ಅಧೋವದನರಾಗಿ ನಿಂತಿದ್ದರು. ರಾಜನು ದರ್ಪಿತಸ್ವರದಿಂದ ಮಾತಾಡ ಹತ್ತಿದನು.

**ರಾಜ—** ಕುಮಾರರೇ, ನಿಮ್ಮ ಈ ಔದ್ಧತ್ಯವನ್ನು ಕಂಡು ನನ್ನ ಕೋಪಾಗ್ನಿಯು ಪ್ರಜ್ವಲಿಸಹತ್ತಿದೆ. ಯೌವನದ ಮದದಿಂದ ಒದಗತಕ್ಕ ಯಶೋಪಯಶಗಳನ್ನು ಗಣನೆಗೆ ತಾರದೆ, ನನ್ನನ್ನೂ ಲೆಕ್ಕಿಸದೆ ಈ ಬಾಲವಧೆ ಯನ್ನು ಮಾಡಿದಿರಲ್ಲವೇ? ಕುಮಾರಾ, ರಾಜಶೇಖರಾ. ನನ್ನ ಎಲ್ಲ ಮನೋರಾಜ್ಯ ವನ್ನು ಹಾಳುಮಾಡಿಬಿಟ್ಟೆಯಲ್ಲ, ನೀನು ಧರ್ಮಮಾರ್ಗದಲ್ಲಿ ನಡೆದು, ನನ್ನನ್ನೂ ನಮ್ಮ ವಂಶವನ್ನೂ ಉದ್ಧರಿಸುವೆಯೆಂದು ನಂಬಿದ್ದೆನು; ಆದರೆ ಇಂಥ ಅನನ್ವಿತ ಕೃತ್ಯವನ್ನು ಮಾಡಿ ಪಾಪರಾಶಿಯನ್ನು ಹೊತ್ತುಕೊಂಡೆಯಾ? ಶತ್ರುಸೈನ್ಯದ ಮೇಲೆ ಬಿದ್ದು ಸಮರವ್ಯಾಪಾರದಲ್ಲಿ ಮನಸ್ಸನ್ನು ರಮಿಸಲು ಯತ್ನಿಸದೆ, ಭಕ್ತಿಮಾರ್ಗ ವನ್ನು ಸಂರಕ್ಷಿಸುವದರಲ್ಲಿ ಮನಸ್ಸು ಮಾಡದೆ, ಶಿವಭಕ್ತಶಿಶುವನ್ನು ಸಂಹರಿಸು ವದಕ್ಕೆ ನಿನ್ನ ಮನಸ್ಸುಂಟಾಯಿತೇ? ಭಕ್ತರ ಮನಸ್ಸಿಗೆ ನೋವನ್ನುಂಟುಮಾಡಿದ ಪಾತಕಕ್ಕೆ ನಿಮ್ಮ ದೇಹವನ್ನರ್ಪಿಸಿದರೂ ಅದು ಹೋಗಲಾರದು. ಇರಲಿ. ನಿಮ್ಮಿಬ್ಬರಲ್ಲಿ ಈ ಅಪರಾಧವನ್ನು ಮಾಡಿದ ಪಾಪಿ ಯಾವನೆಂಬದನ್ನು ಹೇಳಿಬಿಡಿರಿ.

ರಾಜನ ವಾಕ್ಯಗಳನ್ನು ಕೇಳಿ ಮಿತವಚನನು ಮುಂದೆಬಂದು ಕೈಮುಗಿದು—

**ಮಿತವಚನ**— ಜೀಯಾ, ಯುವರಾಜನೂ ನಾನೂ ಹೊಸದಾಗಿ ತರಿಸಿದ ಕುದುರೆಗಳನ್ನೇರಿ ಸಸೈನ್ಯವಾಗಿ ವಿಹರಿಸಿ ತಿರುಗಿ ಬರುವಾಗ, ಈ ಬಾಲಕನು ನೋಡಲಿಕ್ಕೆಂದು ಬೀದಿಗೆ ಬರಲು ಯುವರಾಜನು ತನ್ನ ಕುದುರೆಯನ್ನು ಬಾಲಕನ ಮೇಲೆ ಹಾರಿಸಿ ದಾಟಿಹೋದನು. ನನಗೆ ಕುದುರೆಯನ್ನು ಹಾರಿಸಲಿಕ್ಕೂ ನಿಲ್ಲಿಸಲಿಕ್ಕೂ ಸಾಧ್ಯವಾಗದ್ದರಿಂದ, ನನ್ನ ಕುದುರೆಯ ಖುರದಿಂದಲೇ ಈ ಬಾಲಕನ ಪ್ರಾಣಹರಣವಾಯಿತು. ಆದದರಿಂದ ಅದಕ್ಕೆ ಪ್ರತಿಯಾಗಿ ನನ್ನ ಈ ಶಿರವನ್ನು ಅರ್ಪಿಸುವಂತೆ ಆಜ್ಞೆಯಾಗಬೇಕೆಂದು ಬೇಡಿಕೊಳ್ಳುತ್ತೇನೆ.

ಮಿತವಚನನ ಮಾತುಗಳನ್ನು ಕೇಳಿ ಎಲ್ಲರೂ ಆಶ್ಚರ್ಯಚಕಿತರಾದರು. ಮಂತ್ರಿಯ ಹೃದಯವು ಚಿಂತೆಯಿಂದಾವರಿಸಿತು. ಅಷ್ಟರಲ್ಲಿ ಯುವರಾಜ ರಾಜಶೇಖರನು ಮುಂದೆ ಬಂದು ಅರಸನಿಗೆ ಕೈಮುಗಿದು ವಿನಯದಿಂದ—

**ರಾಜಶೇಖರ**— ದೊರೆಯೇ! ನನ್ನದಿಷ್ಟು ವಿನಂತಿಯನ್ನು ಕೇಳಿಕೊಂಡು ಮುಂದೆ ಚಿತ್ತಕ್ಕೆ ತೋರಿದಂತೆ ಆಜ್ಞೆಮಾಡಬೇಕೆಂದು ಬೇಡಿಕೊಳ್ಳುವೆನು.

**ರಾಜ**— ಆಗಲಿ. ನಿನ್ನ ಅಭಿಪ್ರಾಯವೇನಿರುವದೆಂಬದನ್ನು ಸ್ಪಷ್ಟವಾಗಿ ಹೇಳಿಬಿಡು.

**ರಾಜಶೇಖರ**— ಜೀಯಾ, ಸಿಂಧುದೇಶದ ಅರಸನು ಕೊಟ್ಟ ಹೊಸ ಕುದುರೆಗಳನ್ನೇರಿ ವಿಹರಿಸಬೇಕೆಂದು ನನ್ನ ಮನಸ್ಸಿನಲ್ಲಿ ಬರಲು ಅದನ್ನು ಮಿತವಚನನಿಗೆ ಹೇಳಿದೆನು. ಆಗ ಅವನು ಅದರಿಂದುಂಟಾಗುವ ಸಂಕಟಗಳನ್ನು ವಿವರಿಸಿ ಆ ಕಾರ್ಯದಲ್ಲಿ ಪ್ರವೇಶಿಸಬೇಡವೆಂದು ಹಲವುಬಗೆಯಿಂದ ಉಪದೇಶಮಾಡಿದನು. ಆದರೆ ಮೂಢನಾದ ನಾನು ಅವನ ಉಪದೇಶಾಮೃತವನ್ನು ಗ್ರಹಿಸದೆ ಒತ್ತಾಯ ಪಡಿಸಿದ್ದರಿಂದ ಮಂತ್ರಿಪುತ್ರನು, ನನ್ನ ಮನಸ್ಸನ್ನು ಮುರಿಯಲಾರದೆ ಅಶ್ವದೇರಾಟಕ್ಕೆ ಸಮ್ಮತಿಸಿದನು. ಅಂದಮೇಲೆ ಈ ಅಪರಾಧದ ಮೂಲಕಾರಣವು ನಾನೇ ಇರುವೆನಾದದರಿಂದ ನನ್ನ ಶಿರವನ್ನೇ ಈ ಬಾಲಕನ ಶಿರಕ್ಕೆ ಪ್ರತಿಯಾಗಿ ಅರ್ಪಿಸಲು ಆಜ್ಞೆ ದೊರೆಯಬೇಕೆಂದು ಬೇಡಿಕೊಳ್ಳುತ್ತೇನೆ.

**ರಾಜ**— ಅಪರಾಧವು ನಿನ್ನಿಂದಲೇ ಘಟಿಸಿದಂತಾಯಿತು. ಆದರಿಂದ ಈ ಬಾಲಕನ ಶಿರಕ್ಕಾಗಿ ನಿನ್ನ ಶಿರವನ್ನರ್ಪಿಸುವದು ಅವಶ್ಯವು. ಮಂತ್ರೀ, ಈ ಮಹಾಪರಾಧಿಯ ಶಿರವನ್ನು ಸಂಜೆಯೊಳಗಾಗಿ ಈ ಆಸ್ಥಾನಕ್ಕೆ ತಂದು ತೋರಿಸು.

ರಾಜನ ಈ ನ್ಯಾಯನಿಷ್ಠುರತೆಯನ್ನು ನೋಡಿ ಸಭಿಕರೆಲ್ಲರೂ ಬೆರಗಾಗಿ

ಹೋದರು. ಮತ್ತು ರಾಜಕುಮಾರನಿಗಾದ ಶಿಕ್ಷೆಯಿಂದ ಮರಮರನೆ ಮರುಗಿದರು. ರಾಜಾಜ್ಞೆಯ ಮೇರೆಗೆ ಮಂತ್ರಿಯು ರಾಜಪುತ್ರನನ್ನು ಕರೆದುಕೊಂಡು ಸಭಾಗೃಹ ದಿಂದ ಹೊರಗೆ ಬಂದನು. ಮಿತ್ರನ ಪ್ರಾಣವು ಉಳಿಯಿತೆಂದು ಸಂತೋಷದಿಂದ ರಾಜಶೇಖರನು ಅವನನ್ನು ಹಿಂಬಾಲಿಸಿದನು. ಹೊರಗೆ ಬಂದ ಬಳಿಕ ರಾಜಪುತ್ರನು ಮನೆಗೆ ಹೋಗಿ ಎಲ್ಲರ ದರ್ಶನತೆಗೆದುಕೊಂಡು ಬರುವದಕ್ಕೆ ಮಂತ್ರಿಯಿಂದ ಅವಧಿ ಯನ್ನು ಪಡೆದು ಹೋದನು. ಮಂತ್ರಿಯು ಖಿನ್ನಹೃದಯನಾಗಿ ತನ್ನ ಮನೆಗೆ ಬಂದು ನಿತ್ಯಕೃತ್ಯಗಳನ್ನು ತೀರಿಸಿಕೊಂಡು ತನ್ನಲ್ಲಿಯೇ ಆಲೋಚಿಸಹತ್ತಿದನು. “ ಇಷ್ಟು ದಿವಸಗಳ ವರೆಗೆ ರಾಜನ ಸೇವೆಯನ್ನು ವಿಶ್ವಾಸದಿಂದ ಮಾಡಿ ಕೊನೆಗೆ ರಾಜಪುತ್ರನ ಪ್ರಾಣಾಪಹಾರವನ್ನು ಮಾಡಬೇಕಾಯಿತೇ? ಧರ್ಮಿಷ್ಠನೂ ಶೂರನೂ, ಪರಮಭಗವದ್ಭಕ್ತನೂ ಆದ ರಾಜಪುತ್ರನ ವಧೆಯನ್ನು ನಾನೆಂತು ಮಾಡಬಲ್ಲೆನು? ನನ್ನ ಮಗನು ಅಪರಾಧಿಯಾಗಿರಲು ಅವನನ್ನು ಉಳಿಸುವದಕ್ಕಾಗಿ ಅಪರಾಧವನ್ನು ತನ್ನ ಮೇಲೆ ಹೊತ್ತುಕೊಂಡಿರುವ ಉದಾರಹೃದಯದ ರಾಜ ಪುತ್ರನನ್ನು ವಧಿಸಲಿಕ್ಕೆ ನನ್ನ ಕೈಗಳಾದರೂ ಹೇಗೆ ಏಳುವವು? ಇಂತಹ ಕೃತ್ಯ ವನ್ನು ಮಾಡುವದಕ್ಕಿಂತಲೂ ನಾನೇ ಆತ್ಮಹತ್ಯವನ್ನು ಮಾಡಿಕೊಂಡರೆ ಒಳಿತಾ ಗುವದೆ”ಂದು ಯೋಚಿಸಿ ಮನದಲ್ಲಿ ದೇವರನ್ನು ನೆನೆದು ಕೈಗತ್ತಿಯಿಂದ ಇರಿದು ಕೊಂಡು ಬಿಟ್ಟನು. ಸ್ವಾಮಿನಿಷ್ಠನಾದ ವೃದ್ಧಮಂತ್ರಿಯು ಪ್ರಾಣೋತ್ಕ್ರಮಣ ವಾಯಿತು! ಅವನ ಮೃತದೇಹವು ನೆಲದ ಮೇಲೆ ಬಿದ್ದುಬಿಟ್ಟಿತು!

( ೫ )

ಅರಮನೆಯೊಳಗಿನ ಒಂದು ಭಾಗವು. ಮಹಾರಾಣಿಯು ವಿಶ್ರಾಂತಿಗೃಹ ವಾದುದರಿಂದ ಅದರ ಸೊಬಗನ್ನು ಬಣ್ಣಿಸಲಸದಳವು. ಅರಮನೆಯ ಮಧ್ಯ ಭಾಗದಲ್ಲೊಂದು ಮಂಚವು. ಅದರ ಮೇಲೆ ಹಂಸತೂಲಿಕಾತಲ್ಪದ ಮೇಲೆ ದಿಂಬಿಗೆ ಆತುಕೊಂಡು ಮಹಾರಾಣಿಯಾದ ಅಮೃತವತಿಯು ಕುಳಿತುಕೊಂಡಿದ್ದಳು. ಸುತ್ತಲೂ ದಾಸಿಯರೆಲ್ಲರೂ ಸೇವೆಯಲ್ಲಿ ನಿರತರಾಗಿದ್ದರು. ರಾಣಿಯ ಮೊಗದ ಮೇಲೆ ಚಿಂತೆಯ ರೇಖೆಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಕುಮಾರ ರಾಜಶೇಖರ ನಿಗಾದ ಶಿಕ್ಷೆಯನ್ನು ದೂತರ ಮುಖದಿಂದ ಕೇಳಿ ಮನಸ್ಸಿನಲ್ಲಿಯೇ ಅತ್ಯಂತವಾಗಿ ಕಳವಳಗೊಳ್ಳುತ್ತಿದ್ದಳು. ಅಷ್ಟರಲ್ಲಿ ರಾಜಶೇಖರನು ತಾಯಿಯ ದರ್ಶನಕ್ಕಾಗಿ ಬಂದು ಅವಳ ಚರಣಗಳ ಮೇಲೆ ಮಸ್ತಕವನ್ನಿಟ್ಟನು.

**ರಾಜಶೇಖರ**—ಮಾತೇ, ಶರಣಶಿಶುವನ್ನು ವಧಿಸಿದ ಮಹಾಪರಾಧ ಕ್ಕಾಗಿ ಜನಕನು ನನಗೆ ದೇಹಾಂತಶಿಕ್ಷೆಯನ್ನು ವಿಧಿಸಿರುವನು. ಆದರೆ ಮರಣ ಕ್ಕಿಂತಲೂ ಪೂರ್ವದಲ್ಲಿ ನಿಮ್ಮ ದರ್ಶನವನ್ನು ತೆಗೆದುಕೊಂಡು ಹೋಗಬೇಕೆಂದು

ಬಂದಿರುವೆನು. ನನ್ನ ಮರಣದಿಂದಾಗತಕ್ಕ ದುಃಖವನ್ನು ಮರೆತುಬಿಡಬೇಕೆಂದು ಬೇಡಿಕೊಳ್ಳುವೆನು. ಅತ್ಯಂತವಾಗಿ ಪ್ರೀತಿಸುತ್ತ ದೊಡ್ಡವನನ್ನು ಮಾಡಿ, ನನ್ನ ಬಾಲ ಲೀಲೆಗಳನ್ನು ನೋಡಿ ಆನಂದಹೊಂದಿ, ನನ್ನ ಯೌವನೋದಯವಿಲಾಸವನ್ನು ನೋಡಬೇಕೆನ್ನುವಷ್ಟರಲ್ಲಿ ಮರಣ ಒದಗಿತೆಂದು ದುಃಖಿಸಬೇಡಿರೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ಇನ್ನು ಮೇಲೆ ನನ್ನ ಮಿತ್ರನಾದ ಮಿತವಚನನನ್ನೇ ಪುತ್ರ ನೆಂದು ಭಾವಿಸಿ ನನ್ನ ಮೇಲಿನ ಅಕ್ಕರತೆಯನ್ನು ಅವನ ಮೇಲಿಡಬೇಕೆಂದು ಪ್ರಾರ್ಥಿಸುವೆನು. ನನಗೆ ಮರಣ ಒದಗುವದೆಂದು ಸ್ವಲ್ಪವಾದರೂ ಕೆಡಕೆನಿಸುವ ದಿಲ್ಲ. ಆದರೆ ನಿಮ್ಮ ಈ ಕರುಣಾಜನಕವಾದ ಮುಖವನ್ನು ನೋಡಿ ನನಗೆ ಅತ್ಯಂತಶೋಕವಾಗುತ್ತಿದೆ. ಆದದರಿಂದ ದುಃಖವನ್ನು ಬದಿಗಿರಿಸಿ ನನಗೆ ಆನಂದ ದಿಂದ ನಿರೋಪವನ್ನು ಕೊಡಬೇಕು

ಮಗನ ಈ ಮಾತುಗಳನ್ನು ಕೇಳಿ ರಾಣಿಗೆ ಅತ್ಯಂತದುಃಖವಾಯಿತು. ಆದರೂ ಅದನ್ನು ನುಂಗಿಕೊಂಡು ವೀರಮಾತೆಯೆಂಬನ್ವಯವು ಸಾರ್ಥಕವಾಗುವಂತೆ—

**ರಾಣಿ**—ಮಗನೇ, ಈ ಜಗತ್ತಿನಲ್ಲಿ ಯಾವ ತಾಯಿಯಾದರೂ ಮಗನ ಮರಣಕ್ಕೆ ಆನಂದದಿಂದ ಸಮ್ಮತಿಸುತ್ತಿರುವಳೇ! ಆದರೂ ರಾಜಾಜ್ಞೆಯನ್ನು ಪಾಲಿಸುವದಕ್ಕಾಗಿ ನಾನು ಗಟ್ಟಿಮನಸ್ಸನ್ನು ಮಾಡುತ್ತೇನೆ. ನಿನ್ನ ಈ ಸತ್ಯಶೀಲತೆ ಯನ್ನೂ ಧೈರ್ಯವನ್ನೂ ನೋಡಿ ನನಗೆ ಅತ್ಯಂತ ಆನಂದವಾಗಿದೆ. ನನ್ನ ಪತಿಯ ಸತ್ಯನಿಷ್ಠೆಯನ್ನೂ, ನ್ಯಾಯನಿಷ್ಠುರತೆಯನ್ನೂ ಪ್ರಕಟಮಾಡುವದಕ್ಕಾಗಿ ನೀನು ನಿನ್ನ ಪ್ರಾಣವನ್ನರ್ಪಿಸಿರುವೆ. ಈ ರೀತಿಯಾದ ಸತ್ಯವೂ, ವಿನಯವೂ, ಸೌಜನ್ಯವೂ ನನ್ನ ಮಗನಲ್ಲಿ ಅಲ್ಲದೆ ಅನ್ಯರಲ್ಲಿ ಇರಲಾರವು. ಇದು ನನಗೆ ಅತ್ಯಂತ ಅಭಿಮಾ ನದ ವಿಷಯವಾಗಿದೆ. ಆದದರಿಂದ ರಾಜಾಜ್ಞೆಯಂತೆ ವರ್ತಿಸುವದು ಅವಶ್ಯವು.

ಹೀಗೆ ಹೇಳಿ ಧೈರ್ಯದಿಂದ ಮಗನಿಗೆ ಹೊರಡಲಪ್ಪಣೆ ಕೊಟ್ಟಳು. ಜನ ನಿಯ ಅಪ್ಪಣೆಯನ್ನು ಪಡೆದ ರಾಜಶೇಖರನು ಹೊರಡಲು ಸಿದ್ಧನಾಗುವಷ್ಟರಲ್ಲಿ ರಾಜದೂತನೊಬ್ಬನು ರಾಜಾಜ್ಞೆಯ ಮೇರೆಗೆ ಅವನನ್ನು ವಧಸ್ಥಾನಕ್ಕೆ ಕರೆದೊ ಯ್ಯಲಿಕ್ಕೆ ಬಂದನು. ರಾಜಪುತ್ರನು ಭಗವನ್ನಾಮಸ್ಮರಣೆಯನ್ನು ಮಾಡುತ್ತ ಶಾಂತಮುಖದಿಂದ ಅವನನ್ನು ಹಿಂಬಾಲಿಸಿದನು. ರಾಜದೂತನು ವಧಸ್ಥಾನಕ್ಕೆ ಕರೆದೊಯ್ದನು. ಆದರೆ ಅವನ ಮೇಲೆ ಖಡ್ಗವನ್ನು ಪ್ರಯೋಗಿಸಲು ಮನ ಮೆಚ್ಚದೆ ದುಃಖದಿಂದ ಮೈಮರೆತು ನಿಂತನು. ಇದನ್ನು ಕಂಡು ರಾಜಶೇಖರನು ಆ ದೂತ ನನ್ನು ಎಚ್ಚರಿಸಿ ಅವನ ಕರ್ತವ್ಯವನ್ನು ತೀರಿಸಿಬಿಡುವದಕ್ಕೆ ಹೇಳಿದನು. ಆದರೂ ಆ ದೂತನು ಸಮ್ಮತಿಸಲಿಲ್ಲ. ಇದರಿಂದ ರಾಜಾಜ್ಞೆಗೆ ಭಂಗಬರುವದೆಂದು ತಿಳಿದು ರಾಜಪುತ್ರನು ತಾನೇ ತನ್ನ ಕೈಖಡ್ಗದಿಂದ ಕೊರಳನ್ನು ಕೊಯ್ದುಕೊಂಡು

ಬಿಟ್ಟನು. ಭಕ್ತಶ್ರೇಷ್ಠನಾದ ರಾಜಕುಮಾರನ ರುಂಡವು ಎಡೆಬಿಡದೆ ಶಿವನಾಮೋಚ್ಚಾರಣೆಯನ್ನು ಮಾಡುವದನ್ನು ನೋಡಿ ಎಲ್ಲರೂ ವಿಸ್ಮಿತರಾದರು. ರಾಜದೂತನು ರಾಜಶೇಖರನ ರುಂಡವನ್ನು ಕೈಯಲ್ಲಿ ಹಿಡಿದುಕೊಂಡು ಹೋಗಿ ಆಸ್ಥಾನದಲ್ಲಿ ರಾಜನೆದುರಿಗೆ ಇಟ್ಟನು. ಈಶಭಜನೆಯನ್ನು ಮಾಡುತ್ತಿದ್ದ ಆ ಮುಖವು ಸ್ವಲ್ಪವಾದರೂ ಕುಂದಿರಲಿಲ್ಲ. ಲಲಾಟಪ್ರದೇಶವು ಭಸ್ಮದಿಂದ ಪರಿಶೋಭಿಸುತ್ತಿದ್ದು ಪ್ರಾಣೋತ್ಕ್ರಮಣದ ಕಾಲಕ್ಕೆ ಕಣ್ಣುಗಳನ್ನು ಮುಚ್ಚಿದುದರಿಂದ ಕಣ್ಣು ಮುಚ್ಚಿ ತಪಶ್ಚರ್ಯಮಾಡುವ ಋಷಿಶ್ರೇಷ್ಠನ ನೆನಪುಮಾಡಿಕೊಡುತ್ತಿದ್ದಿತು. ತೇಜಃಪುಂಜವಾದ ಅವನ ಮುಖಮುದ್ರೆಯನ್ನು ನೋಡಿದರೆ ಅದು ಮೃತಮುಖವೆಂದು ಕಲ್ಪಿಸಲಿಕ್ಕೆ ಸಹ ಬಾರದಂತಿದ್ದಿತು. ಇಂಥ ಭಕ್ತಶ್ರೇಷ್ಠನ ಮುಖಕಮಲವು ರಾಜಾಸ್ಥಾನದಲ್ಲಿರಿಸಲ್ಪಟ್ಟಿತು!

## ( ೬ )

ಸುಶೋಭಿತವಾದ ಆಸ್ಥಾನಮಂಡಪದಲ್ಲಿ ಸತ್ಯಶಾಲಿಯಾದ ಸತ್ಯೇಂದ್ರಭೂಪಾಲನು ಮ್ಲಾನವದನದಿಂದ ಕುಳಿತುಕೊಂಡಿದ್ದನು. ಆಸ್ಥಾನದಲ್ಲಿ ಹಲವರು ರಾಜನ ನ್ಯಾಯನಿರ್ಣಯಕ್ಕಾಗಿ ವಿಸ್ಮಯಪಡುತ್ತಿದ್ದರು. ಹಲವರು ಪ್ರತ್ಯಕ್ಷ ಮಗನನ್ನು ಕೊಲ್ಲಿಸಿದ ರಾಜನ ನಿಷ್ಠುರತೆಗಾಗಿ ಮನಸಿನಲ್ಲಿಯೇ ಮರುಗುತ್ತಿದ್ದರು. ಕೆಲವರು ರಾಜಪುತ್ರನ ಗುಣಗಳನ್ನು ಸ್ಮರಿಸಿ ಕಣ್ಣೀರಿಡುತ್ತಿದ್ದರು. ಒಟ್ಟಿನ ಮೇಲೆ ರಾಜಾಸ್ಥಾನವೆಲ್ಲವೂ ಔದಾಸೀನ್ಯದಿಂದ ತುಂಬಿ ತುಳುಕುತ್ತಿದ್ದಿತು. ಅಷ್ಟರಲ್ಲಿ ಮೇಲೆ ಹೇಳಿದಂತೆ ರಾಜದೂತನು ಯುವರಾಜನ ರುಂಡವನ್ನು ತಂದು ಆಸ್ಥಾನದಲ್ಲಿರಿಸಲು, ಮೊದಲೇ ಶೋಕಾಕುಳಿತರಾದ ಸಭಿಕರೆಲ್ಲರೂ ಶೋಕಾವೇಗವನ್ನು ತಡೆಯಲಾರದೇ ಘೋರಿಂದು ಅಳಹತ್ತಿದರು. ಆಸ್ಥಾನಮಂದಿರವೆಲ್ಲವೂ ಶೋಕರವದಿಂದ ಪ್ರತಿಧ್ವನಿತವಾಗಹತ್ತಿತು. ಇಂತಹ ಹೃದಯವಿದಾರಕದೃಶ್ಯವನ್ನು ಕಂಡು ರಾಜನ ಹೃದಯವು ಶೋಕದಿಂದ ತಳಮಳಿಸಹತ್ತಿತು. ಅವನು ಅತ್ಯಂತವಾಗಿ ಶೋಕಿಸಹತ್ತಿದನು. "ಬಾಲ್ಯದಿಂದಲೂ ಯಾವನನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದೆನೋ, ಯಾವನಿಂದ ಇಹಪರಲೋಕಗಳ ಸೌಖ್ಯವನ್ನು ಹೊಂದುವೆನೆಂದು ತಿಳಿದಿದ್ದೆನೋ ಅಂತಹ ಮೋಹದ ಮಗನ ಈ ಅವಸ್ಥೆಯನ್ನು ನೋಡಿ ಹೇಗೆ ಸೈರಿಸಲಿ? ಶಿಶುತ್ವದಿಂದಲೂ ಅತ್ಯಂತ ಅಕ್ಕರತೆಯಿಂದ ತೊಡೆಯ ಮೇಲಾಡಿಸಿ ಸಣ್ಣವನನ್ನು ದೊಡ್ಡವನನ್ನಾಗಿ ಮಾಡಿ ಕೊನೆಗೆ ನನ್ನ ಕೈಯಿಂದಲೇ ಮಗನ ಪ್ರಾಣಹರಣ ಮಾಡಬೇಕಾಯಿತೇ? ಇಂತಹ ನನ್ನ ನ್ಯಾಯನಿಷ್ಠುರತೆಗೆ ಶತಶಃ ಧಿಕ್ಕಾರವಿರಲಿ! ನನ್ನ ಪರಲೋಕದ ಸಾಧನವಾದ ಸದ್ಗುಣಭರಿತನಾದ ಭಗವದ್ಭಕ್ತನಾದ ಮಗನನ್ನು ಕಳೆದುಕೊಂಡು ನಾನು ಜೀವಿ

ಸಿರುವದರಿಂದ ಏನು ಫಲವು? ನನ್ನ ಈ ವಿಶಾಲವಾದ ರಾಜ್ಯವನ್ನೂ ಅಪಾರವಾದ ಸಂಪತ್ತನ್ನೂ ತೆಗೆದುಕೊಂಡು ನಾನೇನು ಮಾಡಲಿ? ಎಲ್ಲವೂ ಅಸಾರವೇ! ಇಂದಿಗೆ ನನ್ನ ಜೀವನವೇ ಅಸಾರಮಯವಾಯಿತು." ಎಂದು ಮೊದಲಾಗಿ ಶೋಕಿಸಿ ಕೊನೆಗೆ ಧೈರ್ಯವನ್ನು ತಾಳಿ ತಿರುಕೊಳವಿನಾಚಿಗೆ—"ತಾಯೀ, ಇದು ನೋಡು; ನಿನ್ನ ಮಗನ ಶಿರವನ್ನರಿದವನ ಶಿರವು, ಮತ್ತು ಅದಕ್ಕೆ ಜೋಡಾಗಿ ಇದೊಂದು ಶಿರವು!" ಎಂದು ಹೇಳಿ ಕುಮಾರನ ಶಿರವನ್ನೂ, ಮಂತ್ರಿಯ ಶಿರವನ್ನೂ, ಶಂಕರನ ಶಿರವ ಎಡಬಲದಲ್ಲಿ ಇರಿಸಿದನು. ಅರಸನ ಮಾತುಗಳನ್ನು ಕೇಳಿ ಶೋಕದಿಂದ ಬೆಂದು ಹೋಗಿದ್ದ ತಿರುಕೊಳವಿನಾಚಿಯು—"ರಾಜೇಶ್ವರನೇ ಕೇವಲ ಭಿಕ್ಷುಕಳಾದ ನನ್ನ ಮಗನ ಸಲುವಾಗಿ ಸಮಸ್ತರಾಜ್ಯವನ್ನು ಪಾಲಿಸಲಿಕ್ಕೆ ಯೋಗ್ಯನಾದ ನಿನ್ನ ಕುಮಾರನನ್ನು ಕೊಲ್ಲಿಸಿದೆಯಲ್ಲ! ರಾಜಪುತ್ರನ ವಧೆಗೆ ಉದ್ಯುಕ್ತಳಾದ ನನ್ನ ಪಾಪವು ಆತ್ಮವಿಸರ್ಜನೆಯಿಂದಲ್ಲದೆ ತೊಳೆಯಲಾರದು!" ಎಂದು ಹೇಳಿ ಸಮೀಪದಲ್ಲಿದ್ದ ಸೇವಕನ ಖಡ್ಗವನ್ನು ಕಸಿದುಕೊಂಡು ಒಳ್ಳೆಯ ಆವೇಶದಿಂದ ಇರಿದುಕೊಂಡು ಬಿಟ್ಟಳು. ಇದೆಲ್ಲವನ್ನೂ ನೋಡಿ ಸಭಿಕರು ವಿಸ್ಮಯಚಿತ್ತರಾಗಿ ಸ್ತಬ್ಧರಾಗಿ ಕುಳಿತುಬಿಟ್ಟರು. ರಾಜನು ಸಹ ತನ್ನ ಉಕ್ಕುತ್ತಿರುವ ಶೋಕವನ್ನು ತಡೆಯಲಾರದೆ ಮನದೊಳಗೆ ಪರಮೇಶ್ವರನನ್ನು ಧ್ಯಾನಿಸುತ್ತ ಕೈಯೊಳಗಿನ ತೀಕ್ಷ್ಣವಾದ ಖಡ್ಗದಿಂದ ಉದರವನ್ನು ಭೇದಿಸಿಕೊಂಡು ಇಹಲೋಕದ ಎಲ್ಲ ದುಃಖಗಳಿಂದ ಮುಕ್ತನಾದನು. ಸಭೆಯಲ್ಲಿ ಎಲ್ಲ ಕಡೆಯಲ್ಲಿಯೂ ಹಾಹಾಕಾರವೆದ್ದಿತು. ಈ ಅಶುಭವಾರ್ತೆಯು ಸುತ್ತಲೂ ಕಾಳ್ಗಿಚ್ಚಿನಂತೆ ಹಬ್ಬಿತು. ಅಂತಃಪುರದ ವರೆಗೆ ಮುಟ್ಟಿತು. ಅಂತಃಪುರದಲ್ಲಿ ಮಹಾರಾಣಿಯಾದ ಅಮೃತವತಿಯು ತನ್ನ ಪತಿಪುತ್ರರು ಮಡಿದ ವಾರ್ತೆಯನ್ನು ಕೇಳಿ ಬಹಳವಾಗಿ ಶೋಕಿಸಿ ಕೊನೆಗೆ ಮನಸ್ಸನ್ನು ದೃಢಪಡಿಸಿಕೊಂಡು, ವೀರವೃತ್ತಿಯನ್ನು ಧಾರಣಮಾಡಿ ರಾಜಾಸ್ಥಾನಕ್ಕೆ ಬಂದಳು. ಅವಳೊಡನೆ ರಾಜಶೇಖರನ ಪತ್ನಿಯೂ ಮಂತ್ರಿಪತ್ನಿಯೂ ಬಂದಿದ್ದರು. ಅವರು ತಮ್ಮ ಪತಿಯ ಸಾನ್ನಿಧ್ಯವನ್ನು ತೀವ್ರವಾಗಿ ಹೊಂದುವದಕ್ಕೆ ಅತ್ಯಂತ ಉತ್ಸುಕರಾಗಿದ್ದರೆಂಬುದು ಅವರ ಮುಖಲಕ್ಷಣದಿಂದ ಸ್ಪಷ್ಟವಾಗಿ ತಿಳಿಯುವಂತಿದ್ದಿತು. ಅವರ ಸುಹಾಸ್ಯಮಯವಾದ ಮುಖಮುದ್ರೆಯು ಉಗ್ರತೆಯಿಂದ ತುಂಬಿಕೊಂಡಿತ್ತು. ಅವರೆಲ್ಲರಿಗೆ ದೃಢಚಿತ್ತಳಾದ ಮಹಾರಾಣಿಯೇ ಮಾರ್ಗದರ್ಶಕಳಾಗಿದ್ದಳು. ಎಲ್ಲರೂ ತಮ್ಮ ಪತಿಯ ಶಿರದೆದುರಿಗೆ ನಿಂತು ಅವನ ವದನಾರವಿಂದವನ್ನು ನೋಡುತ್ತ ಧ್ಯಾನಮಗ್ನರಾದರು. ಪ್ರತಿಯೊಬ್ಬರ ಕೈಯಲ್ಲಿಯೂ ಒರೆಗಳೆದ ತೀಕ್ಷ್ಣಧಾರೆಯ ಖಡ್ಗಗಳಿದ್ದವು. ಅವರ ಕೂದಲುಗಳು

ಬೆನ್ನ ಮೇಲೆ ಅಲೆದಾಡುತ್ತಿದ್ದವ. ವಿಶಾಲವಾದ ಲಲಾಟವೆಲ್ಲವೂ ಕುಂಕುಮದಿಂದ ಮುಚ್ಚಿ ಹೋಗಿದ್ದಿತು. ವೀರವೃತ್ತಿಯ ಅವರ ಆಕೃತಿಯು ನೋಡುವವರಿಗೆ ಭಯಪ್ರದವಾಗಿದ್ದಿತು. ಅವರ ಅಂತರಂಗವು ಕೇವಲ ಪತಿಯ ಧ್ಯಾನದಲ್ಲಿಯೇ ಮಗ್ನವಾಗಿದ್ದದರಿಂದ ಬಾಹ್ಯವ್ಯಾಪಾರದ ಕಲ್ಪನೆಯೇ ಅವರಿಗಿರಲಿಲ್ಲ, ತಮ್ಮ ಪತಿಯ ಧ್ಯಾನವನ್ನು ಮಾಡುತ್ತ ತಮ್ಮ ಕೈಖಡ್ಗದಿಂದ ಕೊರಳನ್ನು ಕತ್ತರಿಸಲು ದ್ಯುಕ್ತರಾಗುವಷ್ಟರಲ್ಲಿಯೇ ಸಭಾಗೃಹದಲ್ಲಿ ಒಂದು ವಿಲಕ್ಷಣವಾದ ತೇಜಸ್ಸು ದ್ಭವಿಸಿತು. ಆ ತೇಜಸ್ಸನ್ನು ಸಹಿಸಲಾರದೇ ಇತರರು ತಮ್ಮ ಕಣ್ಣುಗಳನ್ನು ಮುಚ್ಚಿದರು. ದೃಢನಿಶ್ಚಯದವರಾದ ಸ್ತ್ರೀಯರು ಆ ತೇಜಸ್ಸನ್ನು ಎವೆಯಿಕ್ಕದೇ ನೋಡತೊಡಗಿದರು. ಆ ದಿವ್ಯತೇಜದ ಮಧ್ಯದಲ್ಲಿ ಪಾರ್ವತೀ ಪರಮೇಶ್ವರರ ದಿವ್ಯಮೂರ್ತಿಯು ಅವರ ದೃಷ್ಟಿಗೋಚರವಾಯಿತು. ಅವರ ಕೈಯೊಳಗಿನ ಖಡ್ಗಗಳು ತಮ್ಮಿಂದ ತಾವೇ ಬಿದ್ದುಬಿಟ್ಟವು. ಪರಮೇಶ್ವರನ ಮೂರ್ತಿಯನ್ನು ನೋಡಿ ಎಲ್ಲರೂ ಭಕ್ತಿಪರವಶರಾಗಿ ದೇಹಭಾನವನ್ನು ಮರೆಯಹತ್ತಿದರು. ರಾಣಿಯು ಮುಂದೆ ಬಂದು ಭಕ್ತವತ್ಸಲನ ಪಾದಕಮಲಗಳ ಮೇಲೆ ಉರುಳಾಡಹತ್ತಿದಳು. ಕೃಪಾಕರನಾದ ಶಂಕರನು ಅವಳನ್ನು ಹಿಡಿದೆತ್ತಿ ಅವಳ ಬಯಕೆಯನ್ನು ಕೇಳಿದನು. ಸಂತುಷ್ಟಚಿತ್ತಳಾದ ರಾಣಿಯು, ಮೃತಿಹೊಂದಿದವರು ಪುನರ್ಜೀವವನ್ನು ಪಡೆಯುವ ವರವನ್ನು ದಯಪಾಲಿಸೆಂದು ಬೇಡಿಕೊಂಡಳು. ಭಕ್ತರ ಇಷ್ಟಾರ್ಥವನ್ನು ಪೂರಯಿಸಲು ಬದ್ಧಕಂಕಣನಾದ ಪರಮಾತ್ಮನು ಅವಳು ಇಚ್ಛಿಸಿದ ವರವನ್ನು ದಯಪಾಲಿಸಿದನು. ಮೃತ್ಯುಂಜಯನ ವರವಾದ ಬಳಿಕ ಮೃತರು ಬದುಕುವದೇನಾಶ್ಚರ್ಯವು ! ಕೂಡಲೇ ರಾಣಿಯು ಮೃತಿಹೊಂದಿದವರ ಶಿರವನ್ನು ಅವರ ದೇಹಕ್ಕೆ ಜೋಡಿಸಲು ನಿದ್ರೆಯಿಂದೆದ್ದವರಂತೆ ಎಲ್ಲರೂ ಈಶನಾಮೋಚ್ಚಾರಣೆಯನ್ನು ಮಾಡುತ್ತ ಎದ್ದು ಕುಳಿತರು. ಎದುರಿಗೆ ಪರಮೇಶ್ವರನ ದಿವ್ಯಮೂರ್ತಿಯು ಅವರ ದೃಷ್ಟಿಗೆ ಬೀಳಲು ಆನಂದಾತಿಶಯದಿಂದ ಪರಮಾತ್ಮನ ನಾಮವನ್ನು ಸ್ತುತಿಸುತ್ತ ನಲಿದಾಡಹತ್ತಿದರು. ಭಕ್ತಿಯ ಅತಿರೇಕದಿಂದ ಅವರ ಕಣ್ಣುಗಳಲ್ಲಿ ಅಶ್ರುಗಳು ಪ್ರವಹಿಸಹತ್ತಿದವು. ನೋಡನೋಡುವಷ್ಟರಲ್ಲಿ ಸರ್ವಶಕ್ತಿವಂತನಾದ ಈಶ್ವರನು ಅದೃಶ್ಯನಾದನು. ಎಲ್ಲರೂ ವಿಸ್ಮಯಗೊಂಡರು. ತಮಗೆ ಈ ಜನ್ಮದಲ್ಲಿ ಪರಮೇಶ್ವರನು ಪ್ರತ್ಯಕ್ಷದರ್ಶನಕೊಟ್ಟಿದ್ದರಿಂದ ತಮ್ಮ ಜನ್ಮವು ಸಾರ್ಥಕವಾಯಿತೆಂದು ಭಾವಿಸಿದರು. ತಮ್ಮ ತಮ್ಮ ಇಷ್ಟವಸ್ತುವಿನ ಪ್ರಾಪ್ತಿಯಾದದರಿಂದ ಎಲ್ಲರೂ ಆನಂದಾಂಬುಧಿಯಲ್ಲಿ ಲೋಲಾಡಹತ್ತಿದರು. ಮಗನು ದೊರೆತದ್ದರಿಂದ ತಿರುಕೊಳವಿನಾಚಿಗಾದ ಆನಂದವನ್ನಂತೂ ಬಣ್ಣಿಸುವದು ಅಸಾಧ್ಯವು !

# ಬಂಧವಿಮೋಚನೆ

೧

ಪುರಾತನ ಕಾಲದ ಕತೆ ಇದು. ಆಗಿನ ಕಾಲಕ್ಕೆ ಹಿಮಾಲಯದ ಉತ್ತರಕ್ಕೆ ಬಹು ದೂರದಲ್ಲಿ 'ಅಮರಾವತಿ' ಎಂಬ ಪಟ್ಟಣವಿತ್ತು. ಅದರ ವೈಭವಕ್ಕೆ ಎಣೆಯಿದ್ದಿಲ್ಲ. ಪೃಥ್ವಿಯಲ್ಲಿಯ ಉತ್ತಮವಸ್ತುಗಳೆಲ್ಲ ಅಲ್ಲಿ ಇದ್ದವು. ಗಜಶ್ರೇಷ್ಠವಾದ 'ಐರಾವತ'ವೂ ಅಶ್ವರತ್ನವಾದ 'ಉಚ್ಚೈಶ್ರವ'ವೂ, ರತ್ನಶ್ರೇಷ್ಠವಾದ 'ಪರಶುಮಣಿ'ಯೂ ಆಯುಧವಲ್ಲಿ ಶ್ರೇಷ್ಠವೆನಿಸಿದ 'ವಜ್ರಾಯುಧ'ವೂ ಅಮರಾವತಿಯ ಒಡೆಯನಾದ ಇಂದ್ರನ ಬಳಿಯಲ್ಲಿದ್ದವು.

ಇಂದ್ರನು ಶಾಸ್ತ್ರಕಲೆಗಳಿಗೆ ಒಳ್ಳೆಯ ಉತ್ತೇಜನ ಕೊಟ್ಟಿದ್ದನು. ಅಲ್ಲಿಯ ಶಾಸ್ತ್ರಕೋವಿದರಲ್ಲಿ ಮಯ, ವಿಶ್ವಕರ್ಮ, ಧನ್ವಂತರಿ, ಅಶ್ವಿನೀಕುಮಾರರು ಮೊದಲಾದವರಿದ್ದರು. ಇಂದ್ರನಲ್ಲಿ ವಿಮಾನದ ಪಡೆಯು ಬಲಿಷ್ಠವಾಗಿದ್ದಿತ್ತು. ಅದರಿಂದ ಅವನ ಅನುಯಾಯಿಗಳಿಗೆ ಖೇಚರರೆಂಬ ಹೆಸರು ಬಿದ್ದಿತ್ತು.

ಅಮರಾವತಿಯಿಂದ ಎಷ್ಟೋ ಜನರು ಬೇರೆ ಕಡೆಗೆ ಹೋಗಿ, ಒಕ್ಕಲಾಗಿ ನಿಂತಿದ್ದರು. ಅವರಲ್ಲಿ ಚಿತ್ರಸೇನ–ಅಂಗಾರವರ್ಮರು ಪ್ರಸಿದ್ಧರು. ಇವರು ನಮ್ಮ ಭರತಖಂಡದಲ್ಲಿ 'ವಸತಿ'ಗಳನ್ನು ಸ್ಥಾಪಿಸಿದ್ದರು.

ಆಗಿನ ಕಾಲದಲ್ಲಿ ನಮ್ಮ ದೇಶದೊಳಗೆ ಚಂದ್ರವಂಶದವರೆಂದು ಹೆಸರಾದ ಅರಸರಲ್ಲಿ ಧೃತರಾಷ್ಟ್ರನೆಂಬುವವನು ಹಸ್ತಿನಾವತಿಯಲ್ಲಿ ಆಳುತ್ತಿದ್ದನು. ಅವನು ಕುರುಡನಿದ್ದದರಿಂದ ಎಲ್ಲ ರಾಜ್ಯಭಾರವನ್ನು ಕೌರವರೆಂಬ ತನ್ನ ಮಕ್ಕಳಿಗೆ ಒಪ್ಪಿಸಿದ್ದನು. ಕೌರವರಲ್ಲಿ ದುರ್ಯೋಧನನೆಂಬವನು ಹಿರಿಯನು.

ಧೃತರಾಷ್ಟ್ರರಾಜನಿಗೆ ಪಾಂಡುವೆಂಬ ತಮ್ಮನಿದ್ದನು. ಅವನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ, ಅಡವಿಯಲ್ಲಿ ದೇಹಬಿಟ್ಟನು. ಅವನಿಗೆ ಧರ್ಮ, ಭೀಮ, ಅರ್ಜುನ, ನಕುಲ, ಸಹದೇವರೆಂಬ ಐವರು ಮಕ್ಕಳಿದ್ದರು. ಇವರಲ್ಲಿ ಭೀಮಾರ್ಜುನರು ಬಲು ಗಟ್ಟಿಗರು. ಇವರಿಗೂ ಕೌರವರಿಗೆ ಸರಿಯಾದ ರಾಜ್ಯವು ದೊರೆತಿತ್ತು. ಇವರ ರಾಜಧಾನಿ ಇಂದ್ರಪ್ರಸ್ಥವೆಂಬುದು. ಇವರು ತಮ್ಮ ಶೌರ್ಯದಿಂದ ಅನೇಕದೇಶದ ಅರಸರನ್ನು ಗೆದ್ದು, ರಾಜಸೂಯವೆಂಬ ಯಾಗವನ್ನು ಮಾಡಿದರು.

ಮೊದಲು ಕೌರವರು ಪಾಂಡವರನ್ನು ಅರಗಿನ ಮನೆಯಲ್ಲಿ ಸುಡಬೇಕೆಂದು ಯೋಚಿಸಿದ್ದರು. ಆದರೆ ಪಾಂಡವರು ಈ ಸಂಗತಿಯನ್ನು ಮೊದಲೇ ತಿಳಿದು, ಅಲ್ಲಿಂದ ಪಾರಾಗಿ, ಅಡವಿಯಲ್ಲಿ ಸಂಚರಿಸತೊಡಗಿದರು. ಅಲ್ಲಿ ಹಿಡಿಂಬನೆಂಬ ಅನಾರ್ಯಕುಲದ ಅರಸನಿಗೂ, ಭೀಮನಿಗೂ ಕಡುಗಾಳಗವಾಗಿ, ಅದರಲ್ಲಿ ಹಿಡಿಂಬನು ಸತ್ತನು. ಭೀಮನು ಹಿಡಿಂಬನ ತಂಗಿಯನ್ನು ಮದುವೆಯಾದನು. ಅವಳಿಂದ ಘಟೋತ್ಕಚನೆಂಬ ಮಗನು ಹುಟ್ಟಿದನು.

ಮುಂದೆ ಪಾಂಡವರು ಏಕಚಕ್ರವೆಂಬಲ್ಲಿಗೆ ಹೋಗಿ, ಗುಪ್ತವೇಷದಿಂದ ಇರಹತ್ತಿದರು. ಅಲ್ಲಿ ಬಕನೆಂಬ ಅನಾರ್ಯ ಪಾಳಯಗಾರನಿದ್ದನು. ಅವನನ್ನು ಭೀಮನು ಕೊಂದನು. ಇದರಿಂದ ಪಾಂಡವರಿಗೂ, ಅನಾರ್ಯಕುಲದ 'ಅಸುರ' ಎಂಬ ಜನಾಂಗದವರಿಗೂ ದ್ವೇಷ ಬಳೆಯತೊಡಗಿತು.

ಏಕಚಕ್ರನಗರದಲ್ಲಿರುವಾಗ ಪಾಂಚಾಲರಾಜನ ಮಗಳಾದ ದ್ರೌಪದಿಯ ಸ್ವಯಂವರವಾಗುವದೆಂದು ಕೇಳಿ ಪಾಂಡವರು ಅಲ್ಲಿಗೆ ಹೊರಟರು. ಮಾರ್ಗದಲ್ಲಿ ಅಂಗಾರವರ್ಮನ ವಸತಿಯ ಸೀಮೆ ಹತ್ತಿತು. ಅಂಗಾರವರ್ಮನು ಪಾಂಡವರನ್ನು ನೋಡಿ, ಅವರ ಮಾರ್ಗವನ್ನು ಪ್ರತಿಬಂಧಿಸಿದನು. ಅರ್ಜುನನಿಗೂ ಅಂಗಾರವರ್ಮನಿಗೂ ಕಾಳಗವೆಸಗಿ, ಅದರಲ್ಲಿ ಅಂಗಾರವರ್ಮನು ಸೋತು ಪಾಂಡವರಿಗೆ ಶರಣುಬಂದನು. ಧರ್ಮರಾಜನು ಅವನನ್ನು ಕ್ಷಮಿಸಿದನು. ಅದರಿಂದ ಅಂಗಾರವರ್ಮನಿಗೂ ಪಾಂಡವರಿಗೂ ಗೆಳೆತನ ಬೆಳೆಯಿತು.

ಪಾಂಡವರು ದ್ರೌಪದಿಯನ್ನು ಲಗ್ನವಾದರು. ಇದರಿಂದ ಅವರಿಗೆ ದ್ರುಪದ ರಾಜನ ಸಾಹಾಯ್ಯವು ದೊರೆಯಿತು. ಇದೇ ಸಮಯದಲ್ಲಿ ಪಾಂಡವರ ಸೋದರ ಮಾವನ ಮಗನಾದ ಕೃಷ್ಣನೆಂಬ ಯಾದವರ ಅರಸನು ಪಾಂಡವರನ್ನು ಕಾಣಲಿಕ್ಕೆ ಬಂದನು. ಇವನೂ ಆ ಕಾಲದಲ್ಲಿ ಹೆಸರಾದ ಕಲಿಯು. ಈ ಕೃಷ್ಣನನ್ನು ಆಗಿನ ಕಾಲದ ಎಷ್ಟೋ ಜನರು ದೇವಾಂಶಸಂಭೂತನೆಂದು ಅನ್ನುತ್ತಿದ್ದರು. ಪಾಂಡವರಿಗೆ ಈ ಕೃಷ್ಣನೂ ಸಹಾಯಕನಾದನು.

ಈ ಸಂಗತಿಗಳೆಲ್ಲ ಧೃತರಾಷ್ಟ್ರರಾಜನಿಗೆ ದೂತರ ಮುಖದಿಂದ ತಿಳಿದವು. ಆಗ ಅವನು ತನ್ನ ಮಂತ್ರಿಗಳೊಡನೆ ಆಲೋಚನೆಮಾಡಿ, ಪಾಂಡವರ ರಾಜ್ಯವನ್ನು ಅವರಿಗೆ ತಿರುಗಿಕೊಟ್ಟನು. ಅವರು ಇಂದ್ರಪ್ರಸ್ಥದಲ್ಲಿ ಆಳಹತ್ತಿದರು.

ದುರ್ಯೋಧನನು ಸ್ವಭಾವದಿಂದ ದುಷ್ಟನಾಗಿದ್ದನು. ಅವನು ಪಾಂಡವರಿಗೆ ರಾಜಸೂಯಯಾಗದಲ್ಲಿ ದೊರೆತ ಸಂಪತ್ತನ್ನು ನೋಡಿ, ಬಹಳೇ ಖಿನ್ನನಾ

ದನು. ಕೌರವನ ಈ ಖಿನ್ನತ್ವವನ್ನು ಅವನ ಸೋದರಮಾವನಾದ ಶಕುನಿ ಎಂಬ ವನು ಕಂಡು, "ನೀನು ಚಿಂತೆಮಾಡಬೇಡ. ಪಾಂಡವರನ್ನು ಜೂಜಿನಲ್ಲಿ ಜಯಿಸಿ ಅವರ ಸಂಪತ್ತನ್ನು ನಿನಗೆ ಕೊಡಿಸುವೆನು." ಎಂದು ವಚನಕೊಟ್ಟನು.

ಪಾಂಡವರು ಕೌರವರ ಸಂಗಡ ಜೂಜಾಡಿ ಸೋತರು. ರಾಜ್ಯವೂ, ಸಂಪತ್ತೂ ಕೌರವರನ್ನು ಸೇರಿತು. ಪಾಂಡವರು ೧೨ ವರ್ಷ ವನವಾಸಕ್ಕೆ ಹೊರಟರು.

೨

ಇಂದ್ರನು ನಂದನವನವೆಂಬ ತನ್ನ ತೋಟದಲ್ಲಿ ಚಿಂತೆಗೈಯುತ್ತ ಕುಳಿತಿದ್ದನು. ಅವನಿಗೆ ತನ್ನ ಐಶ್ವರ್ಯವು ಅಶಾಶ್ವತವೆಂದು ಅನಿಸತೊಡಗಿತ್ತು. ತಿಲೋತ್ತಮೆ ಮೊದಲಾದ ಸುರಸುಂದರಿಯರ ನರ್ತನವು ಅವನಿಗೆ ರುಚಿಸದಾಯಿತು. ನಂದನವನದೊಳಗಿನ ಪಾರಿಜಾತಕುಸುಮವು ಅವನ ಮನಸ್ಸನ್ನು ಪ್ರಸನ್ನಮಾಡಲಿಕ್ಕೆ ಸಮರ್ಥವಾಗದಾಯಿತು. ತುಂಬರರೆಂಬ ಶ್ರೇಷ್ಠ ಗಾಯನ ಪಟುಗಳ ಗಾಯನದ ಇಂಪು ಅವನಿಗೆ ಸೊಂಪುದೋರದಾಯಿತು. ತನ್ನ ಪತ್ನಿ ಯಾದ ಶಚೀದೇವಿಯ ವಿಲಾಸದಿಂದ ಅವನಿಗೆ ಆನಂದವು ತೋರದಾಯಿತು.

ಈ ಪ್ರಕಾರವಾಗಿ ಚಿಂತೆಮಾಡುತ್ತ ಕುಳಿತ ಇಂದ್ರನ ಬಳಿಗೆ ಅವನು ಕಳುಹಿದ ಗುಪ್ತಚಾರನು ಮೆಲ್ಲಗೆ ಬಂದು ನಮಸ್ಕರಿಸಿ ನಿಂತನು. ವಿಚಾರತಂದ್ರಿಯಲ್ಲಿದ್ದ ಇಂದ್ರನು ದೂತನನ್ನು ಕಂಡು ಎಚ್ಚತ್ತನು. ಅವನ ಮುಖಭಾವವನ್ನು ಕಂಡ ಮೇಲಂತೂ ಇಂದ್ರನಿಗೆ ಬಹಳ ಅಸಮಾಧಾನವಾಯಿತು. ಒಂದು ದೀರ್ಘಶ್ವಾಸ ವನ್ನು ಬಿಟ್ಟು, ಇಂದ್ರನು ಆ ಚಾರನಿಗೆ ತನ್ನ ಸಂಗಡ ಬರಲಿಕ್ಕೆ ಸೂಚಿಸಿದನು. ಇಬ್ಬರೂ ಕೂಡಿ ಒಂದು ಗುಪ್ತಗೃಹವನ್ನು ಹೊಕ್ಕರು.

ಇಂದ್ರನು ಆ ಗುಪ್ತಗೃಹದಲ್ಲಿಟ್ಟಿದ್ದ ಆಸನದ ಮೇಲೆ ಕುಳಿತು ಆ ಚಾರ ನನ್ನು ವಿಚಾರಿಸತೊಡಗಿದನು.

**ಇಂದ್ರ**:— ಹಿರಣ್ಯನಗರಿಯಲ್ಲಿ ವಿಶೇಷವೇನು ?

**ದೂತ**:—ಪ್ರಭೋ, ನಾನು ಹಿರಣ್ಯನಗರಿಗೆ ಗುಪ್ತವೇಷದಿಂದ ಹೋದೆನು. ನಿವಾತಕವಚರ ಆ ಬಲಿಷ್ಠವಾದ ರಾಜಧಾನಿಯನ್ನು ನೋಡಿ, ದಂಗಾದೆನು. ಅವರ ಪಡೆಯು ಲೆಕ್ಕವಿಲ್ಲದಷ್ಟಿರುವದು. ಮಾಯಾವಿದ್ಯೆಯಲ್ಲಿ ಅವರೆಲ್ಲರೂ ಪ್ರಾವೀಣ್ಯವನ್ನು ಹೊಂದಿರುವರು. ಆ ಕೋಟೆಯು ಬಹು ಭದ್ರವಾದದ್ದು. ಅಲ್ಲಿ ಅನ್ನಸಂಗ್ರಹವೂ ಶಸ್ತ್ರಾಸ್ತ್ರಗಳ ಸಂಗ್ರಹವೂ ವಿಪುಲವಿರುತ್ತದೆ. ಈ ಪಟ್ಟಣದಲ್ಲಿಯು

ಸಂಗತಿಯನ್ನು ತಿಳಿದುಕೊಳ್ಳುವದಕ್ಕಾಗಿ ನಾನು ಸಾಧುವೇಷವನ್ನು ಧರಿಸಿದೆನು. ಆ ಪಟ್ಟಣದೊಳಗಿನ ವಿಸ್ತೃತವೂ ಭವ್ಯವೂ ಆದೊಂದು ದೇವಾಲಯದಲ್ಲಿ ಹೋಗಿ ಕುಳಿತೆನು. ಆ ಚಂದ್ರಮೌಳಿಯ ದೇವಾಲಯಕ್ಕೆ ಜನರು ತಂಡತಂಡವಾಗಿ ಬರುತ್ತಿದ್ದರು. ಮತ್ತು ಬೇರೆ ಬೇರೆ ವಿಷಯಗಳನ್ನು ಕುರಿತು ಮಾತಾಡುತ್ತ ಕೂಡ್ರುತ್ತಿದ್ದರು. ಅವರ ಮಾತಿನಿಂದ ಈ ನಿವಾತಕವಚರ ಆಳಿಕೆಯಿಂದ ಅಸುರರು ಬಲಿಷ್ಠರೂ, ಒಕ್ಕಟ್ಟುಳ್ಳವರೂ ಆಗಿರುವರೆಂದು ತಿಳಿದುಬಂತು.

"ಒಂದು ದಿನ ಓಣಿಯಲ್ಲಿ ನಾನು ಭಿಕ್ಷೆಗೆ ಸಂಚರಿಸುತ್ತಿದ್ದಾಗ ಕಾಲಿಕೇಯರ ರಾಯಭಾರಿಯು ತನ್ನ ಪರಿವಾರದೊಡನೆ ಹೋಗುತ್ತಿದ್ದನು. ಅವನನ್ನು ನೋಡಿ, ಜನರು ತಮತಮ್ಮೊಳಗೆ— ಕಾಲಿಕೇಯರಿಗೂ, 'ನಮ್ಮ ನಿವಾತಕವಚರಿಗೂ ಗೆಳೆತನವು ಸ್ಥಿರವಾಗಿ ಉಳಿಯುವಂತೆ ಸಂಧಿಯಾಗುವದಿದೆ. ಅದಕ್ಕಾಗಿಯೇ ಈ ರಾಯಭಾರಿಯು ಬಂದಿರುವನು' ಎಂದು ಮಾತಾಡಿದ್ದು ನನ್ನ ಕಿವಿಗೆಬಿತ್ತು.

"ಮರುದಿನ ನಾನು ಕೆರೆಯ ದಂಡೆಯ ಮೇಲೆ ಕುಳಿತಿದ್ದೆನು. ನಿನ್ನೆ ನಡೆದ ಕಾಲಿಕೇಯ– ನಿವಾತಕವಚರ ಮಿತ್ರತ್ವದ ಸಂಧಿಯಲ್ಲಿ ಅಮರಾವತಿಯ ಸುರರ ಸಂಗಡ ಯುದ್ಧದ ಪ್ರಸಂಗ ಬಂದರೆ, ಒಬ್ಬರಿಗೊಬ್ಬರು ನೆರವಾಗಬೇಕೆಂದು ಆದ ಗೊತ್ತುವಳಿಯು ಮಹತ್ವದ್ದು. ಸ್ವಲ್ಪದಿವಸಗಳಲ್ಲಿ ಸುರರ ಸಂಗಡ ಯುದ್ಧದ ಪ್ರಸಂಗವು ಬರಬಹುದು. ಆದಕ್ಕಾಗಿ ನಾವೆಲ್ಲರೂ ಯುದ್ಧದ ಶಿಕ್ಷಣವನ್ನು ಪಡೆದು ದೇಶಕಾರ್ಯಕ್ಕೆ ನೆರವಾಗಬೇಕು, ಎಂದು ಕೆಲವು ಯುವಕರು ಅಲ್ಲಿ ಮಾತಾಡುತ್ತಿದ್ದರು. ಈ ಸಂಗತಿಗಳನ್ನು ತಮಗೆ ಅರುಹಬೇಕೆಂದು ತಮ್ಮೆಡೆಗೆ ಬಂದೆನು."

ಇಂದ್ರನು ಸ್ತಬ್ಧನಾಗಿ ಕುಳಿತು ಇವನ್ನೆಲ್ಲ ಕೇಳುತ್ತಿದ್ದನು. ಆ ದೂತನ ಮಾತಿನಿಂದ ಸ್ವಲ್ಪ ದಿವಸಗಳಲ್ಲಿಯೇ ಅಮರಾವತಿಯು ಆಪತ್ತಿಗೊಳಗಾಗುವದೆಂದು ಅವನು ಚಿಂತಿಸತೊಡಗಿದನು. ಸೇವಕನಿಗೆ ಅವನ ಕೆಲಸಕ್ಕೆ ಹೋಗಲಿಕ್ಕೆ ಅಪ್ಪಣೆಕೊಟ್ಟನು. ತಾನು ಮುಂದೆ ಬರುವ ಆಪತ್ತಿಗೆ ಎದುರಾಗುವದಕ್ಕೆ ಯೋಗ್ಯ ಉಪಾಯ ಮಾಡುವದರಲ್ಲಿ ತೊಡಗಿದನು.

೩

ದೇವಾಸುರರ ಯುದ್ಧದಲ್ಲಿ ಅಸುರರಿಗೆ ಜಯವು ದೊರೆಯಿತು. ಇಂದ್ರನ ಹೇರಳವಾದ ಸಂಪತ್ತನ್ನು ಅವರು ಸೆಳೆದುಕೊಂಡರು. ಎಷ್ಟೋ ಸುರವನಿತೆಯರನ್ನು ಸೆರೆಹಿಡಿದರು. ಇಂದ್ರನ ವರ್ಚಸ್ಸು ಕಡಿಮೆಯಾಯಿತು. ಕಾಲಿಕೇಯ

ನಿವಾತಕವಚರು ಬಹಳ ಪ್ರಬಲರಾದರು. ಅವರು ಅಸುರರನ್ನೆಲ್ಲ ಒಟ್ಟುಗೂಡಿಸಿ, ಸುರರನ್ನು ತಲೆಯೆತ್ತದಂತೆ ಮಾಡಬೇಕೆಂಬ ಪ್ರಯತ್ನ ನಡಿಸಿದರು.

ಆಗಿನ ಕಾಲದಲ್ಲಿ ಭೂಮಿಯ ಬೇರೆ ಬೇರೆ ಭಾಗಗಳಲ್ಲಿ ಅಸುರರ ಅನೇಕ ರಾಜ್ಯಗಳಿದ್ದವು. ನಮ್ಮ ಭರತಭೂಮಿಯಲ್ಲಿಯೂ ಅನೇಕ ಅಸುರಾಧಿಪರಿದ್ದರು. ಭರತಖಂಡದ ಅಸುರರಲ್ಲಿ ಕೃಷ್ಣದ್ವೇಷಿಗಳೂ ಪಾಂಡವದ್ವೇಷಿಗಳೂ ಬಹಳ. ನಿವಾತಕವಚರು ಈ ಅಸುರರನ್ನೆಲ್ಲ ಒಟ್ಟುಗೂಡಿಸಿ ಅಸುರಸಂಘವನ್ನು ಮಾಡಿದರು. ಈ ಸಂಘಕ್ಕೂ ಕೌರವರಿಗೂ ಸ್ನೇಹದ ಒಡಂಬಡಿಕೆಯಾಯಿತು.

ಈ ಸಂಗತಿಯನ್ನು ಚಾರರು ಇಂದ್ರನಿಗೆ ತಿಳಿಸಿದರು. ಇಂದ್ರನು ಸುರರ ಸಂಘವನ್ನು ಮಾಡುವ ಸಿದ್ಧತೆ ನಡೆಸಿದನು. ಮೊದಲು ತನ್ನ ವಸತಿಗಾರರನ್ನು ಕರೆಸಿದನು. ಅವರು ತಮ್ಮ ಸೇನೆಯಿಂದೊಡಗೂಡಿ ಬಂದು ಇಂದ್ರನನ್ನು ಕೂಡಿದರು. ಆ ಮೇಲೆ ತನ್ನ ಮಿತ್ರರಾಷ್ಟ್ರದವರಿಗೆ ನಿಮಂತ್ರಣ ಕಳಿಸಿದನು. ಅವರೆಲ್ಲರೂ ಬಂದು ಒಟ್ಟುಗೂಡಿದರು.

ಆ ಮೇಲೆ ಅಂಗಾರವರ್ಮನ ಹೇಳಿಕೆಯಿಂದ ಪಾಂಡವರನ್ನು ತನ್ನ ಸಂಘದಲ್ಲಿ ಸೇರಿಸಿಕೊಳ್ಳುವ ಹಂಚಿಕೆಯನ್ನು ಇಂದ್ರನು ಹುಡುಕತೊಡಗಿದನು. ಗುಪ್ತಚಾರರ ಮುಖದಿಂದ ಪಾಂಡವರು ಎಲ್ಲಿರುವರೆಂಬದನ್ನು ಗೊತ್ತು ಹಚ್ಚಿದನು. ಪಾಂಡವರಲ್ಲಿ ಶಂಕರನ ಅನುಗ್ರಹಕ್ಕೆ ಪಾತ್ರವಾದ ಅರ್ಜುನನಿಂದ ತನ್ನ ಕಾರ್ಯವಾಗಬಹುದೆಂದು ನೆನಿಸಿ, ಅರ್ಜುನನಿದ್ದ ಇಂದ್ರಕೀಲಪರ್ವತಕ್ಕೆ ತನ್ನ ಸಾರಥಿಯಾದ ಮಾತಲಿಯನ್ನು, ಅರ್ಜುನನನ್ನು, ಕರೆದುಕೊಂಡು ಬರುವದಕ್ಕೆ ಕಳಿಸಿದನು.

ಅಂಗಾರವರ್ಮನು ತನ್ನ ಉತ್ತಮವಾದ ವಿಮಾನದ ಮೇಲೆ ಕುಳಿತುಕೊಂಡು ಇಂದ್ರಕೀಲ ಪರ್ವತಕ್ಕೆ ನಡೆದನು.

೪

ಪಾಂಡವರು ವನದಲ್ಲಿ ಬಹಳ ಕಷ್ಟಬಡುತ್ತಿದ್ದರು. ಅವರ ಸಂಗಡ ಸಾವಿರಾರು ಜನ ಬ್ರಾಹ್ಮಣರಿದ್ದರು. ಇವರೆಲ್ಲರ ಉದರಪೋಷಣೆಯ ಭಾರವು ಪಾಂಡವರ ಮೇಲೆಯೇ ಬಿದ್ದಿತ್ತು. ಇಂಥ ಸಂಕಟದಲ್ಲಿಯೂ ಧರ್ಮರಾಜನು ತನಗೆ ದೊರೆತದ್ದನ್ನೇ ಬ್ರಾಹ್ಮಣರಿಗೂ ಕೊಟ್ಟು ಸಮಾಧಾನವೃತ್ತಿಯಿಂದಿದ್ದನು.

ಈ ಪ್ರಕಾರದಿಂದ ಕಾಲಕಳೆಯುತ್ತಿರಲು ಇವರಿದ್ದ ಅಡವಿಯಲ್ಲಿ ಫಲಮೂಲಗಳು ದೊರೆಯದಂತಾದವು. ಆಗ ಎರಡನೆಯ ಅಡವಿಗೆ ಹೋಗಬೇಕಾಯಿತು. ದಾರಿಯಲ್ಲಿ ಪರಿಪರಿಯ ಕಷ್ಟಗಳೊದಗಿದವು. ಅದರಿಂದ ಧರ್ಮರಾಜನ ಅಚಲನು

ನಸ್ಸೂ ತಳಮಳಗೊಂಡಿತು. ಅವನು ತನ್ನ ಸ್ಥಿತಿಯನ್ನು ನೆನಿಸಿ ದುಃಖಪಡತೊಡಗಿದನು. ಆಗ ವ್ಯಾಸರೆಂಬ ಮಹಾತ್ಮರು ಬಂದು, ಧರ್ಮರಾಜನನ್ನು ಸಮಾಧಾನಗೊಳಿಸಿ, ಅರ್ಜುನನಿಗೆ ಭಗವಾನ್ ಶಂಕರನಿಂದ ಪಾಶುಪತಾಸ್ತ್ರವು ದೊರೆಯುವ ಹಾಗೆ ಮಂತ್ರೋಪದೇಶವಿತ್ತು, ಮಂತ್ರವನ್ನು ಇಂದ್ರಕೀಲಪರ್ವತದಲ್ಲಿ ಜಪಿಸಲಿಕ್ಕೆ ಹೇಳಿ ತಮ್ಮ ಆಶ್ರಮಕ್ಕೆ ನಡೆದರು.

ಇತ್ತ ಅರ್ಜುನನು ಇಂದ್ರಕೀಲಪರ್ವತದಲ್ಲಿ ತಪಸ್ಸಿಗೆ ಕುಳಿತನು. ಕೆಲವು ಕಾಲದ ಮೇಲೆ ಅವನಿಗೆ ತಪಸ್ಸಿನ ಫಲವು ಪ್ರಾಪ್ತವಾಯಿತು. ಭಗವಾನ್ ಶಂಕರನ ಅನುಗ್ರಹವಾಯಿತು.

ಇದೇ ಸಂಧಿಯಲ್ಲಿ ಇಂದ್ರನಿಂದ ಆಜ್ಞಪ್ತನಾದ ಮಾತಲಿಯು ಅರ್ಜುನನ ಸಮೀಪದಲ್ಲಿ ವಿಮಾನದಿಂದ ಇಳಿದನು.

ಅರ್ಜುನನು ಮಾತಲಿಯನ್ನು ಚಕಿತಮುದ್ರೆಯಿಂದ ನೋಡುತ್ತ ಸ್ತಬ್ಧನಾಗಿ ನಿಂತನು. ಆಗ ಮಾತಲಿಯು–'ವೀರಾಧಿವೀರನೆ, ನೀನು ಮಧ್ಯಮ ಪಾಂಡವನಾದ ಅರ್ಜುನನೆಂಬುವನ್ನು ನಾನು ಬಲ್ಲೆನು. ಸುರಪತಿಯಾದ ಇಂದ್ರನು ನನ್ನನ್ನು ನಿನ್ನ ಬಳಿಗೆ ಕಳಿಸಿರುವನು. ಭಗವಾನ್ ಶಂಕರನ ಅನುಗ್ರಹವನ್ನು ಸಂಪಾದಿಸುವದಕ್ಕಾಗಿ, ನೀನು ಬಹಳ ಶ್ರಮವನ್ನು ಹೊಂದಿರುವೆ. ಆ ಶ್ರಮವು ಪರಿಹಾರವಾಗುವ ವರೆಗೆ ಶಚೀಪತಿಯು ನಿನ್ನನ್ನು ತನ್ನ ಬಳಿಯಲ್ಲಿ ಇಟ್ಟುಕೊಳ್ಳಬೇಕೆಂದು ಇಚ್ಛಿಸುತ್ತಿರುವನು. ಈ ಬಯಕೆಯನ್ನು ಈಡೇರಿಸುವದು ನಿನ್ನನ್ನೇ ಕೂಡಿದೆ. ನಾನು ಇಂದ್ರಸಾರಥಿಯಾದ ಮಾತಲಿಯು.' ಎಂದು ನುಡಿದು ಸುಮ್ಮನಾದನು.

ಆಗ ಅರ್ಜುನನು ಅತಿಥಿಯಾದ ಮಾತಲಿಯನ್ನು ಷೋಡಶೋಪಚಾರಗಳಿಂದ ಸತ್ಕರಿಸಿ–"ಮಾತಲಿಯೇ, ನಿಮ್ಮ ಒಡೆಯನಾದ ಇಂದ್ರನು ಕುಶಲನೇ ? ಅವನ ಪರಿವಾರದವರು ಕುಶಲರೇ? " ಎಂದು ಕ್ಷೇಮವಾರ್ತೆಯನ್ನು ಕೇಳಿ, ಸ್ವಲ್ಪಹೊತ್ತು ವಿಶ್ರಾಂತಿ ತೆಗೆದುಕೊಳ್ಳುವದಕ್ಕೆ ಅವನಿಗೆ ಬಿನ್ನವಿಸಿದನು.

ಮಾತಲಿಯು ವಿಶ್ರಾಂತಿ ತೆಗೆದುಕೊಂಡನಂತರ, ಅರ್ಜುನನು ಅವನನ್ನು ಕುರಿತು–" ಸುರಪತಿಯಾದ ಇಂದ್ರನು ನನಗೆ ಮಾನ್ಯನು. ಅವನ ಇಚ್ಛೆಯು ನನಗೆ ಆಜ್ಞೆಯೆಂದೇ ತಿಳಿಯುವೆನು. ನಿಮ್ಮ ದರ್ಶನವಾದದ್ದರಿಂದ ಇದು ಸುದಿನವು." ಎಂದು ತಾನು ದೇವಲೋಕಕ್ಕೆ ಬರುವ ಇಚ್ಛೆಯನ್ನು ಪ್ರದರ್ಶಿಸಿದನು.

ಅರ್ಜುನನೂ, ಮಾತಲಿಯೂ ವಿಮಾನದಿಂದ ಸುರಲೋಕಕ್ಕೆ ನಡೆದರು.

೫

ಇಂದು ಸುರನಗರಿಯಲ್ಲಿ ಅತ್ಯುತ್ಕಟವಾದ ಉತ್ಸವವು ನಡೆದಿದೆ. ಅಮರಾವತಿಯು ಮೊದಲೇ ಸುಂದರ ಪಟ್ಟಣವು. ಇಂದು ಅದನ್ನು ಮನಮುಟ್ಟಿ ಸಿಂಗರಿಸಿರುವರು. ಅದರಿಂದ ಅದರ ಸೊಬಗು ಇಮ್ಮಡಿಯಾಗಿದೆ. ಬೀದಿ ಬೀದಿಗೆ ಗುಡಿ ತೋರಣಗಳನ್ನು ಕಟ್ಟಿರುವರು. ಪತಾಕೆಗಳನ್ನು ನೆಟ್ಟಿರುವರು. ಸುವಾಸಿಕ ದ್ರವ್ಯಗಳ ತಳಿಗೊಟ್ಟಿರುವರು. ಕಮಾನುಗಳನ್ನು ಚಿತ್ರವಿಚಿತ್ರವಾಗಿ ಕಟ್ಟಿರುವರು. ಅಲ್ಲಲ್ಲಿ ಸುರರ ಸ್ವಯಂಸೇವಕರ ಪಥಕಗಳು ದೃಷ್ಟಿಗೆ ಬೀಳುತ್ತವೆ ಅವರಲ್ಲಿ ಕೆಲವರು ರಾಷ್ಟ್ರೀಯಪದಗಳನ್ನು ಸುಸ್ವರದಿಂದ ಅನ್ನುತ್ತ, ಓಣಿ ಓಣಿಯಲ್ಲಿ ಸಾಲು ಸಾಲಾಗಿಸಾಗಿರುವರು. ಬೇರೆ ಕೆಲವರು ಪಟ್ಟಣವನ್ನು ಅಲಂಕರಿಸುವದರಲ್ಲಿ ತೊಡಗಿರುವರು. ಇನ್ನು ಕೆಲವರು ತಮ್ಮ ದೇಶದವರಿಗಾದ ಗೆಲುವಿನ ಕತೆಯನ್ನು ನಾಗರಿಕರೆದುರಿಗೆ ಹೇಳಿ ಅವರನ್ನು ಉತ್ಸವದಲ್ಲಿ ತೊಡಗಿಸುತ್ತಿರುವರು.

ಪ್ರತಿಯೊಬ್ಬ ಸುರನಾಗರಿಕನ ಮನದಲ್ಲಿ ಭಾರತವೀರನಾದ ಅರ್ಜುನನ ವಿಷಯಕ್ಕೆ ಅತ್ಯುತ್ಕಟವಾದ ಆತ್ಮೀಯಭಾವವು ಉತ್ಪನ್ನವಾಗಿತ್ತು. ಪ್ರತಿಯೊಬ್ಬ ಸುರನಾರಿಯು ಆಪದ್ಬಾಂಧವನಾದ ಅರ್ಜುನನನ್ನು ನೋಡಿ, ತಮ್ಮ ಕಣ್ಣುಗಳನ್ನು ಸಫಲಮಾಡಿಕೊಳ್ಳಬೇಕೆಂದು ಬಯಸುತ್ತಿದ್ದಳು. ಪ್ರತಿಯೊಬ್ಬ ಸುರಬಾಲಕನು ಅರ್ಜುನನ ನಡೆನುಡಿಗಳ ಅನುಕರಣ ಮಾಡಲಿಕ್ಕೆ ಬಯಸುತ್ತಿದ್ದನು. ಸುರನಗರವೆಲ್ಲವೂ ಅರ್ಜುನನ ಗುಣಗಾನದಿಂದ ದುಮುದುಮಿಸುತ್ತಿತ್ತು; ಶೌರ್ಯಕಥನದಿಂದ ಉದ್ರೇಕಿತವಾಗುತ್ತಿತ್ತು. ಸುರಲೋಕದಲ್ಲಿ ನಡೆದ ಭಾರತವೀರನ ಮನ್ನಣೆಯ ಕಾರಣವು ಅದಾವುದಿರಬಹುದು ?

ನಾವು ಹಿಂದೆ ಹೇಳಿದಂತೆ ಮಾತಲಿಯಿಂದ ಸಹಿತನಾಗಿ ಬಂದ ಅರ್ಜುನನು ದೇವಲೋಕವನ್ನು ಮುಟ್ಟಿದನು. ದೇವೇಂದ್ರನು ಅವನನ್ನು ಸನ್ಮಾನದಿಂದ ಬರಮಾಡಿಕೊಂಡು, ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿ, ಮನ್ನಣೆಮಾಡಿದನು. ಅರ್ಜುನನಿಗಾಗಿ ಬೇರೊಂದು ಅರಮನೆಯನ್ನು ಕೊಟ್ಟನು. ಸೇವೆಗಾಗಿ ದಾಸದಾಸಿಯರನ್ನು ಇಟ್ಟನು. ಅವರ ವಿಶ್ರಾಂತಿಗಾಗಿ ಸುರನರ್ತಕಿಯರು ನರ್ತನವನ್ನು ಮಾಡುತ್ತಿದ್ದರು. ಗಂಧರ್ವರು ಗಾನಮಾಡುತ್ತಿದ್ದರು. ಕವಿಗಳು ಕವನ ಹೇಳುತ್ತಿದ್ದರು. ವಾಗ್ಮಿಗಳು ತರತರದ ಪುಸ್ತಕಗಳನ್ನೋದಿ ತೋರುತ್ತಿದ್ದರು. ವಿದೂಷಕರು ವಿನೋದಗೊಳಿಸುತ್ತಿದ್ದರು. ದೇವನಗರಿಯು ಸುಖದ ತೌರೂರೆಂದು ಅರ್ಜುನನು ತಿಳಿದನು.

ಆದರೆ ದೇವರಾಜನು ಮಾತ್ರ ಯಾವಾಗಲೂ ಚಿಂತೆಯಲ್ಲಿರುವಂತೆ ಅರ್ಜುನನಿಗೆ ಭಾಸವಾಗುತ್ತಿತ್ತು. ಸುರಪತಿಗೆ ಈ ಸೌಖ್ಯಮಯಸ್ಥಿತಿಯಲ್ಲಿ ಅದಾವ ಚಿಂತೆಯು ಆವರಿಸಿರಬಹುದೆಂಬುದು ಅವನಿಗೆ ಹೊಳೆಯದಾಯಿತು. ಅದರಿಂದ ಅರ್ಜುನನು ಒಂದು ದಿನ ಸುರಪತಿಯನ್ನು ಕಂಡು–"ಪ್ರಭೋ, ನೀನದಾವುದೋ ಚಿಂತೆಯಿಂದ ಕೊರಗುವೆಯೆಂದು ನನಗೆ ತೋರುತ್ತದೆ. ಆ ಚಿಂತೆಯ ಕಾರಣವನ್ನು ನನ್ನೆದುರಿಗೆ ಹೇಳುವಂತಿದ್ದರೆ, ತಿಳಿಸೋಣಾಗಬೇಕು. ಸಾಮಾನ್ಯರಿಂದಲೂ ಒಮ್ಮೊಮ್ಮೆ ಎಷ್ಟೋ ಕಾರ್ಯಗಳು ಕೈಗೂಡುವವು." ಎಂದು ಬಿನ್ನಯಿಸಿದನು.

ಅದಕ್ಕೆ **ಇಂದ್ರನು**— ಅರ್ಜುನಾ, ಮೊದಲು ಭೋಗದ ಆಗರವಾದ ಸುರಲೋಕವು ಈಗ ಭಯದ ಆಗರವಾಗಿದೆ. ಸಂಪದ್ಯುಕ್ತವಾದ ಸುರಲೋಕವು ಅಸುರರಿಂದ ಸುಲಿಯಲ್ಪಟ್ಟದ್ದಾಗಿದೆ. ನನ್ನ ಮನಸ್ಸು ಭಯದಿಂದ ಬೀತಿದೆ.

**ಅರ್ಜುನ**— ಸುರಪತಿಯೇ, ನಿನ್ನನ್ನು ಚಿಂತೆಗೊಳಿಸುವಂಥ ಅದಾವ ಸುರದ್ವೇಷಿಯು ಉದಯಿಸಿರುವನು,

**ಇಂದ್ರ**— ಹಿರಣ್ಯ ನಗರಿಯಲ್ಲಿ ನಿವಾತಕವಚರೆಂಬ ಅಸುರರು ಪ್ರಬಲರಾಗಿರುವರು. ಅವರು ಕಾಲಿಕೇಯರು, ಸಂಸಪ್ತಕರು ಮೊದಲಾದವರನ್ನು ಕೂಡಿಕೊಂಡು ನಮ್ಮನ್ನು ಪೂರ್ಣ ನಾಶಗೊಳಿಸಬೇಕೆಂದು ಬಗೆದಿರುವರು. ನಿಮ್ಮ ಕೌರವರೂ ಇವರ ಸ್ನೇಹಿತರಾಗಿರುವರು. ಈಗೊಮ್ಮೆ ಇವರು ನಮ್ಮ ನಗರಿಯನ್ನು ಸುಲಿದಿರುವರು.

**ಅರ್ಜುನ**— ಶಚೀಪತಿಯೇ, ಇದಕ್ಕೆ ಇಷ್ಟೇಕೆ ಚಿಂತಿಸುವೆ? ನನಗೆ ಅಪ್ಪಣೆ ಕೊಟ್ಟರೆ ಆ ಕಾಲಿಕೇಯನಿವಾತಕವಚರನ್ನು ಯಮನ ಮನೆಗೆ ಕಳುಹಿ ಬರುವೆನು.

**ಇಂದ್ರ**— ಅರ್ಜುನಾ, ನೀನು ನಿಷ್ಕಾಮಬುದ್ಧಿಯಿಂದ ಈ ಸುರರ ಕೆಲಸ ಮಾಡಲಿಕ್ಕೆ ಮುಂದುವರಿದದ್ದನ್ನು ನೋಡಿ, ನನಗೆ ಬಹುಸಂತೋಷವಾಗಿದೆ. ಭಗವಾನ್ ಶಂಕರನ ಅನುಗ್ರಹಕ್ಕೆ ಪಾತ್ರನಾದ ನಿನಗೆ ಯಾವಕಾರ್ಯದಲ್ಲಿ ಜಯ ದೊರೆಯಲಿಕ್ಕಿಲ್ಲ? 'ಮೂರುಲೋಕದ ಗಂಡ'ನೆಂಬ ನಿನ್ನ ಬಿರುದು ಸಾರ್ಥಕವಾದದ್ದೇ ಇರುತ್ತದೆ. ನಿನ್ನ ಶೌರ್ಯದಿಂದ ನಮ್ಮ ಸುರಲೋಕವು ಸುರಕ್ಷಿತವಾಗಲಿ" ಎಂದು ಇಂದ್ರನು ಅರ್ಜುನನನ್ನು ಕೊಂಡಾಡಿ; ಅವನನ್ನು ಅಸುರರ ಸಂಗಡ ಯುದ್ಧಕ್ಕೆ ಕಳಿಸುವ ನಿಶ್ಚಯಮಾಡಿದನು.

ಅರ್ಜುನನು ದೇವಸೇನೆಯಿಂದ ಸಹಿತನಾಗಿ, ಕಾಲಕೇಯ–ನಿವಾತಕವಚರ ರಾಜ್ಯವನ್ನು ಹೊಕ್ಕು, ಅವರನ್ನು ಸಂಹರಿಸಿ, ವಿಜಯಿಯಾಗಿ ಬಂದಿದ್ದನು. ಆ ವಿಜಯನನ್ನು ಎದುರುಗೊಳ್ಳುವ ಸಂಭ್ರಮವೇ ಈಗ ಅಮರಾವತಿಯಲ್ಲಿ ನಡೆಯುತ್ತಿತ್ತು.

೬

ಹಸ್ತಿನಾವತಿಯಲ್ಲಿ ಬಹಳ ಉತ್ಸವವು ಕಂಡುಬರುವದು. ವಾರನಾರಿಯರು ಅಲಂಕಾರಭೂಷಿತೆಯರಾಗಿ, ಅರಮನೆಯ ಕಡೆಗೆ ನಡೆದಿರುವರು. ಕರ್ಣ, ಶಕುನಿ, ಮೊದಲಾದ ಮಹಾರಥರು ತಮ್ಮ ಪರಿವಾರದಿಂದ ಸಹಿತವಾಗಿ ದುರ್ಯೋಧನನ ಮಾರ್ಗವನ್ನು ಪ್ರತೀಕ್ಷಿಸುತ್ತ ನಿಂತಿರುವರು. ಪುರಜನರು ಬಗೆಬಗೆಯಿಂದ ಸಿಂಗಾರಾಗಿರುವರು.

ಅಷ್ಟರಲ್ಲಿ ತನ್ನ ತಮ್ಮಂದಿರಿಂದ ಸಹಿತನಾದ ದುರ್ಯೋಧನಮಹಾರಾಜನು ಹೊರಹೊರಟನು. ಜನರೆಲ್ಲ ನಮಸ್ಕರಿಸಹತ್ತಿದರು. ವಂದಿಮಾಗಧರು ಹೊಗಳಹತ್ತಿದರು. ಮಂಗಳವಾದ್ಯಗಳು ಮೊಳಗಹತ್ತಿದವು. ವಾರವನಿತೆಯರು ತಮ್ಮ ಕಣ್ಣುಗಳೆಂಬ ಹೂಗಳಿಂದ ಕೌರವ ಭೂಪತಿಯನ್ನು ಅರ್ಚಿಸತೊಡಗಿದರು. ಕರ್ಣಾದಿನಾಯಕರಿಂದೊಡಗೂಡಿದ ದುರ್ಯೋಧನನು ಹಸ್ತಿನಾವತಿಯಿಂದ ಹೊರಹೊರಟನು. ಇವರೆಲ್ಲರೂ ಇಷ್ಟು ಸಂಭ್ರಮದಿಂದ ಎಲ್ಲಿ ಹೋಗುತ್ತಿರಬಹುದು ?

ನಿನ್ನೆ ಕೌರವರ ಸಭೆಯಲ್ಲಿ ಚಾರನು, ಪಾಂಡವರು ಕಾಮ್ಯಕವನಕ್ಕೆ ಬಂದಿರುವ ಸಮಾಚಾರವನ್ನು ತಂದನು. ಅದನ್ನು ಕೇಳಿ, ಕೌರವನು ತನ್ನ ವೈಭವವನ್ನು ಬಡತನದಲ್ಲಿ ಬಳಲುವ ಪಾಂಡವರೆದುರಿಗೆ ಪ್ರದರ್ಶಿಸಬೇಕೆಂದು ಬಯಸಿ, ಭೀಷ್ಮಾದಿಗಳ ಮಾತನ್ನು ಲಕ್ಷಿಸದೆ, ದನದ ಹಟ್ಟಿಗಳನ್ನು ನೋಡುವದಕ್ಕೆಂದು ಹೊರಟಿರುವನು.

ಆಗಿನ ಕಾಲದಲ್ಲಿ ಪ್ರತಿಯೊಬ್ಬ ಅರಸನೂ ತನ್ನ ಯೋಗ್ಯತೆಗೆ ಸರಿಯಾಗಿ ಆಕಳುಗಳನ್ನು ಸಾಕುತ್ತಿದ್ದನು. ಕೌರವನ ಬಳಿಯಲ್ಲಿಯೂ ಲಕ್ಷಾವಧಿ ಆಕಳುಗಳ ಹಿಂಡುಗಳಿದ್ದವು. ಅವುಗಳಿಗಾಗಿ ಕಾದಿಟ್ಟ ಎಷ್ಟೋ ಅಡವಿಗಳಿರುತ್ತಿದ್ದವು. ಪ್ರತಿಯೊಂದು ಹಳ್ಳಿಯಲ್ಲಿಯೂ ಆಕಳಿಗಾಗಿ ಕಾದಿಟ್ಟ ಅಡವಿಗಳಿದ್ದವು. ಅದರಿಂದ ಎಲ್ಲರಿಗೂ ಆಕಳುಗಳನ್ನು ಸಾಕುವದು ಅನುಕೂಲವಾಗಿತ್ತು. ಆದದರಿಂದ ಜನರಿಗೆ ಗೋರಸವು ವಿಪುಲವಾಗಿ ದೊರೆತು, ಅವರು ತೇಜಸ್ವಿಗಳೂ, ಪರಾಕ್ರ

ಮಿಗಳೂ, ದೀರ್ಘಾಯುಷಿಗಳೂ ಆಗುತ್ತಿದ್ದರು. ಆಸನ ಆಕಳ ಹಿಂಡಿನ ಉಪ ಯೋಗವೂ ಪ್ರಜೆಗಳಿಗೇ ಆಗುತ್ತಿತ್ತು. ಬಿಸಿ ನೀರ ಸವಿಗೆ ಮೆಚ್ಚಿದ ಈಗಿನ ಜನ ರಿಗೆ ಆಗಿನ ಹೈನದ ಸುಖದ ಕಲ್ಪನೆಯು ಹೇಗೆ ಬರಬೇಕು ?

ಕೌರವನು ಗೋಷಯಾತ್ರೆಗೆ ಹೊರಟಿದ್ದನು. ಅವನ ಪರಿವಾರವು ಸಡ ಗರದಿಂದ ಕಾಮ್ಯಕವನವನ್ನು ಹೊಕ್ಕಿತು. ಅಲ್ಲಲ್ಲಿ ಆಕಳ ಹಿಂಡುಗಳನ್ನು ನೋಡುತ್ತ ಕೌರವನು ಒಂದು ರಮ್ಯಪ್ರದೇಶದಲ್ಲಿ ಬೀಡುಬಿಟ್ಟನು. ಅಲ್ಲಿ ಅರ ಮನೆಯಂತೆ ಕಂಗೊಳಿಸುವ ರಾಹುಟಿಗೆಗಳನ್ನು ಹೊಡೆದರು. ಅವುಗಳ ಮೇಲೆ ಬಂಗಾರದ ಕಳಸಗಳು ಶೋಭಿಸುತ್ತಿದ್ದವು. ಆ ಪ್ರದೇಶವು 'ಇದೊಂದು ನೂತನ ನಗರಿ' ಎಂಬಂತೆ ಕಾಣತೊಡಗಿತು.

ಕೌರವರ ಬಿಡಾರಗಳು ಪಾಂಡವರ ಹುಲ್ಲುಮನೆಗಳಿಗೆ ಸಮೀಪವಾಗಿಯೇ ಇದ್ದವು. ಕೌರವನ ವಾರವನಿತೆಯರ ತಂಡವು ಪಾಂಡವರ ಆಶ್ರಮದ ಬಳಿಯಲ್ಲಿ ಸುಳಿಯತೊಡಗಿತು. ಅವರಲ್ಲಿ ಕೆಲವರು ಜಟಾವಲ್ಕಲಧಾರಿಗಳಾದ ಮುನಿಗಳ ಚೇಷ್ಟೆ ಮಾಡತೊಡಗಿದರು. ಕೆಲವರು ಋಷಿಪತ್ನಿಯರು ಬೆಳಸಿದ ಹೂಗಿಡಗ ಳನ್ನು ನಾಶಮಾಡತೊಡಗಿದರು. ಬೇರೆ ಕೆಲವರು ಬ್ರಹ್ಮಚಾರಿಗಳ ಚಂಡಿಕೆಗಳಿಗೆ ಹುಲ್ಲುಸಿವುಡುಕಟ್ಟಿ ವಿನೋದ ಮಾಡತೊಡಗಿದರು ಇನ್ನು ಕೆಲವರು ಅವರ ಮೇಖಲಾಯಜ್ಞೋಪವೀತಗಳನ್ನು ಕೀಳತೊಡಗಿದರು. ಇದರಿಂದ ಆಶ್ರ ಮವು 'ಹಾ ಹಾ' ಕಾರದಿಂದ ವ್ಯಾಪ್ತವಾಯಿತು.

ವಾರವನಿತೆಯರ ಇನ್ನೊಂದು ಪಂಗಡವು ಪಾಂಡವರ ಪರ್ಣಕುಟೀರದ ಬಳಿಯಲ್ಲಿ ಬಂತು. ಅವರಲ್ಲಿ ಕೆಲವರು ಪಾಂಡವರ ಮಡದಿಯಾದ ದ್ರೌಪದಿಯನ್ನು ಕಂಡು, ಬಗೆಬಗೆಯ ಅಂಗವಿಕ್ಷೇಪಗಳಿಂದ ಕುಚೋದ್ಯಮಾಡತೊಡಗಿದರು. ಮತ್ತೆ ಕೆಲವರು ಕಟುಕಿಮಾತುಗಳಿಂದ ದ್ರೌಪದಿಯನ್ನು ನೋಯಿಸತೊಡಗಿದರು.

ಈ ಸಂಗತಿಯು ಧರ್ಮರಾಜನಿಗೆ ತಿಳಿಯಿತು. ಆಗ ಧರ್ಮರಾಜನು ಬ್ರಾಹ್ಮಣರನ್ನೂ, ದ್ರೌಪದಿ ಮೊದಲಾದವರನ್ನೂ ಸಮಾಧಾನಗೊಳಿಸಿ, ದುರ್ಯೋಧನನು ಈ ವನದಿಂದ ಹೋಗುವವರೆಗೆ ನೀವು ಹೊರಬೀಳಬೇಡರೆಂದೂ ನೀವು ಇದ್ದಲ್ಲಿ ಬಂದು ಅವನ ಪರಿವಾರದವರು ಕಷ್ಟಗೊಳಿಸಿದರೂ ಕ್ಷಮಾಶೀಲ ರಾಗಿರೆಂದೂ ಉಪದೇಶಮಾಡಿದನು. ಇದಲ್ಲವೇ ಸಜ್ಜನರವ್ರತವು ?

೭

ಕೌರವನ ಮಡದಿಯಾದ ಭಾನುಮತಿಯು ಧರ್ಮರಾಜನ ಕಾಲಿಗೆರಗಿ ಮಾಂಗಲ್ಯದಾನವನ್ನು ಬೇಡುತ್ತಿರುವಳು. ಅವಳ ಕಣ್ಣಿನಿಂದ ಅವಿರಳವಾದ ಅಶ್ರುಧಾರೆಯು ಹರಿಯುತ್ತಿರುವದು. ಕಂಠವು ಉಬ್ಬಿರುವದು. ಗದ್ಗದಸ್ವರದಿಂದ ಮಾತಾಡುತ್ತಿರುವಳು.

ಧರ್ಮರಾಜನು ಅತ್ಯಂತಕರುಣಾಶಾಲಿಯು. ಭಾನುಮತಿಯ ಈ ಸ್ಥಿತಿಯನ್ನು ಕಂಡು ಕಳವಳಿಸಿದನು. ಅವನು ಕರುಣಾವ್ಯಂಜಕ ಸ್ವರದಿಂದ ಭಾನುಮತಿಯನ್ನು ಕುರಿತು– 'ಕುರುಸಾರ್ವಭೌಮನಿಗೆ ಕರ್ಣಾದಿನಾಯಕರಿರುವಾಗ ಅದೇವ ಆಪತ್ತು ಬಂದಿರುವದವ್ವಾ ?' ಎಂದು ಕೇಳಿದನು.

ಅದಕ್ಕೆ ಭಾನುಮತಿಯು:— ಧರ್ಮಾತ್ಮನೇ, "ನಮ್ಮ ಜನರು ಸುರಪ ಸೇವಕನಾದ ಚಿತ್ರಸೇನನ ತೋಟವನ್ನು ಹೊಕ್ಕರು. ಅದರಿಂದ ಸುರರಿಗೂ ನಮ್ಮವಗೂ ಕಾಳಗವಾಯಿತು. ಕರ್ಣಾದಿಕರ ಹೊಡೆತಕ್ಕೆ ಸುರರು ಕಂಗೆಟ್ಟರು. ಅವನ್ನು ಕಂಡು, ಚಿತ್ರಸೇನನು ಸಿಟ್ಟಿನಿಂದ ಕರ್ಣನ ಸಂಗಡ ಹೋರಾಡಿದನು. ಕರ್ಣನ ಧನುವು ಮುರಿದದ್ದರಿಂದ ನಮ್ಮವರು ಹಿಮ್ಮೆಟ್ಟಿದರು. ಆಗ ಕುರುಪತಿಗೂ ಚಿತ್ರಸೇನನಿಗೂ ಕಾಳಗವಾಗಿ, ಚಿತ್ರಸೇನನು ಅನುಜರಿಂದ ಸಹಿತವಾಗಿ ಕುರುಪತಿಯನ್ನು ಸೆರೆಹಿಡಿದು ಒಯ್ದನು." ಎಂದು ದೂತನು ವರ್ತಮಾನ ತಂದಿದ್ದಾನೆ. ಅದನ್ನು ಕೇಳಿ, ನಾನು ನಿನ್ನನ್ನು ಅರಸುತ್ತ ಬಂದೆನು. ಕುರುಕುಲತಿಲಕನನ್ನು ಬಂಧಮುಕ್ತನನ್ನು ಮಾಡಿಸಿ, ನನಗೆ ಮಾಂಗಲ್ಯದಾನ ಕೊಡುವದು ನಿನ್ನನ್ನೇ ಕೂಡಿದೆ.

ಎಂದು ಶೋಕಿಸುತೊಡಗಿದಳು.

ಆಗ ಧರ್ಮರಾಜನು :— ಭಾನುಮತೀ ನೀನು ಶೋಕಿಸಬೇಡ. ಕೌರವಾಗ್ರಣಿಯನ್ನು ಬಿಡಿಸುವದು ನನ್ನ ಕರ್ತವ್ಯವೇ ಆಗಿದೆ. ನೀನು ಸ್ವಸ್ಥಳಾಗು ಎಂದು ಹೇಳಿ, ಭೀಮಸೇನನ ಕಡೆಗೆ ತಿರುಗಿ 'ಭೀಮಾ, ಕೌರವನು ಚಿತ್ರಸೇನನ ಕೈಯಲ್ಲಿ ಸಿಕ್ಕಿರುವನೆಂಬದನ್ನು ಕೇಳಿದೆಯಾ ? ಅವನನ್ನು ಬಿಡಿಸುವದು ನಮ್ಮ ಕರ್ತವ್ಯವಾಗಿದೆ. ಆದದರಿಂದ ತೀವ್ರಹೋಗಿ ಕೌರವನನ್ನು ಬಿಡಿಸಿಕೊಂಡು ಬಾ!

ಭೀಮ:— ಅಣ್ಣಾ, ಅನ್ನದಲ್ಲಿ ವಿಷವಿಕ್ಕಿದ, ಉರಿಯಲ್ಲಿ ಸುಡಬಯಸಿದ, ಸಭೆಯಲ್ಲಿ ಮಡದಿಯ ಅಪಮಾನಗೊಳಿಸಿದ ಪಾಪಿಯನ್ನು ಬಿಡಿಸಿಕೊಂಡು ಬರ

ಲಿಕ್ಕೆ ಹೇಳುವೆಯಲ್ಲ! ಇದು ಎಂದಿಗೂ ನನ್ನಿಂದಾಗದು. ಸುರರು ಅವನಿಗೆ ತಕ್ಕ ದ್ದನ್ನೇ ಮಾಡಿರುವರು.

**ಧರ್ಮ:—** ಭೀಮಾ, ಹೀಗೆ ಹಟ ಹಿಡಿಯಬೇಡ. ನಮ್ಮ ಚಂದ್ರವಂಶದ ಅಪಮಾನವಾಗುವ ಪ್ರಸಂಗವಿದೆ. ಆದದರಿಂದ ನನ್ನ ಮಾತನ್ನು ನಡಿಸು.

**ಭೀಮ:—** ಪ್ರಭೋ, ಇಂದ್ರನು ನಮಗೆ ಹಿತಚಿಂತಕನಾಗಿರುವನು; ಅವನ ಸೇವಕನಾದ ಚಿತ್ರಸೇನನು ನಮ್ಮ ಸ್ನೇಹಿತನು. ಪ್ರಸಂಗದಲ್ಲಿ ನಮಗೆ ಸಹಾಯವಾಗತಕ್ಕವನು. ಇಂಥವನ ಸಂಗಡ ವೈರಕಟ್ಟಿಕೊಂಡು, ಮರುಳ ದುರ್ಯೋಧನನನ್ನು ಅದೇಕೆ ಬಿಡಿಸಬೇಕು ?

**ಧರ್ಮ:—** ತಮ್ಮಾ, ನೀನು ಇಲ್ಲಿಯೇ ತಪ್ಪುತ್ತಿರುವೆ. ಚಂದ್ರವಂಶದವರನ್ನು ಸುರರು ಸೋಲಿಸಿದರೆಂಬ ಅಪಕೀರ್ತಿಗೆ ನಾವೂ ಭಾಗಿಗಳಾಗುವದಿಲ್ಲವೇ ? ಚಂದ್ರ ವಂಶದ ಯಾವನೊಬ್ಬನ ಅಪಮಾನವು ನಮ್ಮ ಅಪಮಾನವಲ್ಲವೇ ? ಇಷ್ಟಾಗಿ ಇಲ್ಲಿಗೆ ಹಿರಿಯರಾದ ಭೀಷ್ಮದ್ರೋಣಾದಿಗಳು ಬಂದಿಲ್ಲ. ಅವರು ಇಲ್ಲದಾಗ ನಮ್ಮೆದುರಿಗೆ ಕೌರವರ ಅಪಮಾನವಾದದ್ದು ತಿಳಿದರೆ ಹಿರಿಯರೇನೆಂದಾರು ?

**ಭೀಮ:—** ಕೌರವರು ಸಭೆಯಲ್ಲಿ ಪಾಂಚಾಲಿಯ ಅಪಮಾನಮಾಡ ವಾಗ ಹಿರಿಯರೆಲ್ಲರೂ ಇದ್ದರು. ಆಗ ಮಾತನಾಡದ ಹಿರಿಯರು ಈಗ ನಮಗೆ ಹೇಳುವರೆ ?

**ಧರ್ಮ—** ತಮ್ಮಾ, ಅದು ಮನೆಜಗಳವು. ಅದರಲ್ಲಿ **ನಾವು ಐವರು ಒಂದು ಕಡೆಗೆ,** ಕೌರವರು **ನೂರು ಮಂದಿ ಒಂದು ಕಡೆಗೆ.** ಆದರೆ ಇದು ಪರಚಕ್ರವು. ಇದರಲ್ಲಿ ನಾವು **ನೂರಾಐದು ಮಂದಿಯೂ ಒಕ್ಕ ಟ್ಟಾಗಬೇಕು.** ವೈಯಕ್ತಿಕ ಸ್ನೇಹದ್ವೇಷಗಳಿಗೆ ಇಲ್ಲಿ ಸ್ಥಳಗೊಡಲಾಗದು. ಇಂದ್ರನೂ ಚಿತ್ರಸೇನನೂ ನಮ್ಮ ಸ್ನೇಹಿತರಾದರೂ ಭರತವಂಶದ ಮೇಲೆ ಶಸ್ತ್ರ ವೆತ್ತಿರುವದರಿಂದ, ಇಂದು ಅವರು ನಮ್ಮ ವೈರಿಗಳೇ. ಪ್ರಸಂಗ ಬಂದರೆ ನಮ್ಮ ಭರತಖಂಡದವರೆಲ್ಲರೂ ಒಕ್ಕಟ್ಟಾಗಲೇ ಬೇಕು. ಪರವೈರಿಗಳನ್ನು ಸೋಲಿಸಿ ಅಟ್ಟಿದ ಮೇಲೆ, ನಮ್ಮ ಮನೆಯ ಜಗಳವನ್ನು ನಾವು ನೋಡಿಕೊಳ್ಳಲಿಕ್ಕೆ ಬರು ತ್ತದೆ. ನಮ್ಮ ಒಳಜಗಳದಲ್ಲಿ ಕೈಹಾಕುವ ಅಧಿಕಾರವು ಎರಡನೆಯವರಿಗಿಲ್ಲ. ಆದದರಿಂದ ನೀನು ಕೌರವರನ್ನು ಬಿಡಿಸಿಕೊಂಡು ಬಂದು, ನಮ್ಮ ವಂಶಕ್ಕೂ, ದೇಶಕ್ಕೂ ಕೀರ್ತಿಯನ್ನು ಕೊಡು.

**ಭೀಮ**—ಅಣ್ಣಾ, ಈ ಮಾತು ಯುಕ್ತಿಯುಕ್ತವಾದರೂ ನನಗೆ ಒಪ್ಪಿಗೆ ಯಾಗಲೊಲ್ಲದು

ಭೀಮನು ರಾಷ್ಟ್ರಧರ್ಮವನ್ನು ಅರಿಯದೆ ಮಾತಾಡುವದನ್ನು ನೋಡಿ, ಧರ್ಮರಾಜನು ಅಸಮಾಧಾನಪಟ್ಟು, ಅರ್ಜುನನನ್ನು ಕುರಿತು–' ಅರ್ಜುನಾ, ನೀನಾದರೂ ಕೌರವಾಗ್ರಣಿಯನ್ನು ಬಿಡಿಸಿಕೊಂಡು ಬಾ. ಭಾರತವೀರನೆಂಬ ಬಿರುದನ್ನು ಕಾಯ್ದುಕೋ. ನೀನೂ ಭೀಮನಂತೆ ಹಟತೊಟ್ಟರೆ, ನಾನು ಉಪ ವಾಸವ್ರತದಿಂದ ಪ್ರಾಣಬಿಡುವೆನು ! ಎಂದು ಹೇಳಿದನು.

ಅದನ್ನು ಕೇಳಿ, **ಅರ್ಜುನನು**— ಅಣ್ಣಾ, ನಿನ್ನಪ್ಪಣೆಯೇ ನನಗೆ ಮಾನ್ಯವು. ಚಿತ್ರಸೇನನನ್ನು ಸದೆದು, ಕೌರವರನ್ನು ಕ್ಷಣದಲ್ಲಿ ಬಿಡಿಸಿ ತರುವೆನು ಎಂದು ಕಾಲ್ಗೆರಗಿ, ಧನುರ್ಬಾಣಗಳನ್ನು ಧರಿಸಿ, ಮಾರ್ಗದಲ್ಲಿ ಹೋಗುತ್ತಿದ್ದ ಚಿತ್ರಸೇನನನ್ನು ಸೋಲಿಸಿ, ಕೌರವರನ್ನು ಧರ್ಮರಾಜನೆಡೆಗೆ ಕರಕೊಂಡು ನಡೆಯಲಿಕ್ಕೆ ಅವನಿಗೆ ತಿಳಿಸಿದನು.

ಅದಕ್ಕೆ **ಚಿತ್ರಸೇನನು**—ಅರ್ಜುನಾ, ನೀವೆಂಥ ಹುಚ್ಚರು ! ನಿಮ್ಮ ವೈರಿಯನ್ನು ನಾನು ನಾಶಗೊಳಿಸುತ್ತಿದ್ದೆನು. ಅದರಿಂದ ನಿಮಗೇ ಹಿತವಾಗು ತ್ತಿತ್ತಲ್ಲವೆ ?

**ಅರ್ಜುನ**—ನಮ್ಮ ಹಿತಾಹಿತದ ಕಡೆಗೆ ಲಕ್ಷ್ಯಗೊಡುವ ಸಮಯವಿ ದಲ್ಲ. ಮೊದಲು ದುರ್ಯೋಧನನನ್ನು ಧರ್ಮರಾಜನಿಗೆ ಒಪ್ಪಿಸಬೇಕಾಗಿದೆ. ತೀವ್ರವಾಗಿ ನಡೆ. ಎಂದು ಚಿತ್ರಸೇನನಿಂದ ಸಹಿತವಾಗಿ ಬಂದು ಅರ್ಜುನನು ಧರ್ಮರಾಜನನ್ನು ಕಂಡನು. ಧರ್ಮರಾಜನು ಕೌರವರ ' ಬಂಧವಿಮೋಚನೆ ' ಯನ್ನು ಮಾಡಿ, ಅವರನ್ನು ಹಸ್ತಿನಾವತಿಗೆ ಕಳುಹಿದನು. ಇದಲ್ಲವೆ ಸ್ವಜನಾಭಿ ಮಾನವು ?

---

# ಆರ್ಯರಿಗೂ ಕನ್ನಡಿಗರಿಗೂ ಒಪ್ಪಂದ

## (೧)

ಒಂದು ದೊಡ್ಡ ಹಳ್ಳಿಯಲ್ಲಿ ಹತ್ತೆಂಟು ಬ್ರಾಹ್ಮಣರ ಮನೆಗಳಿದ್ದವು. ಅಲ್ಲಿ ಮನೆಗೊಬ್ಬರಂತೆ ಇಂಗ್ರಜಿ ಕಲಿತು ಕೆಲಸವಿಲ್ಲದೆ ಸುಖವಸ್ತುಗಳಂತೆ ಕಾಲ ಹರಣಮಾಡುವ ಕೆಲ ತರುಣರಿದ್ದರು. ಅವರಲ್ಲಿ ರಾಮರಾಯನು ಮುಖ್ಯನು. ಕುಲೀನ; ಸಂಭಾವಿತ; ಮನೆಯಿಂದ ನೆಟ್ಟಗಿದ್ದವ; ಉದಾರ; ವಾಚನಾಭಿರುಚಿ ಯುಳ್ಳವ; ಗಾಯನವಾದನದೊಳಗೂ ಸ್ವಲ್ಪಗತಿ ಇದ್ದವ; ಇವೇ ಚಿಕ್ಕವಯಸ್ಸಿ ನಲ್ಲಿಯೂ ಅವನಿಗೆ ಹಿರಿಯತನವನ್ನು ಕೊಡಿಸಿದ ಗುಣಗಳು.

ನೌಕರಿಯ ಆಶೆಯು ಕಟ್ಟೇ ಆಗಿತ್ತು. ಆದರೂ ಸಹಾಧ್ಯಾಯಿಗಳೆಲ್ಲರೂ ಒಟ್ಟುಗೂಡಿದಾಗ-'ಅಲ್ಲಿ ಜಾಗಾ ಖಾಲಿ ಅದೆ ಆ ಡಿಪಾರ್ಟಮೆಂಟ ಈ ಡಿಪಾರ್ಟ ಮೆಂಟ, ಈ ಫರ್ಮ, ಆ ಕಾರ್ಖಾನೆ, ಪ್ರಯತ್ನಮಾಡಿದರೆ ನೌಕರಿ ಇನ್ನೂ ಸಿಗು ತ್ತವೆ.' ಎಂಬ ಮಾತು ಹೊರಡುತ್ತಿತ್ತು. ಚಹಾನೂ ಕಾಫಿಯೂ ಆದ ಬಳಿಕ ಎಲ್ಲರೂ ಎದ್ದು ಹೋದರೆ ಮುಗಿಯಿತು. "ಆಲಮಟ್ಟಿ ಜಂಗಮರ ಸಮಾಚಾರ."

ರಾಮರಾಯನ ವಾರ್ಷಿಕ ವರಮಾನವು ಕುಟುಂಬಕ್ಕೆ ತಕ್ಕಂತೆ ಚೆನ್ನಾಗಿ ದ್ದಿತು. ಒಂದೆರಡು ಗಂಡುಮಕ್ಕಳೂ ಆಗಿದ್ದವು. ಊರಲ್ಲಿ ಜಗಳ ತೀರಿಸುವ ಕೆಲ ಸವೂ ಇತ್ತಿತ್ತ ಇವನ ಮೇಲೆಯೇ ಬೀಳುತ್ತಿತ್ತು. ಅದರಿಂದ ಆತನ ಮನಸ್ಸಿನಲ್ಲಿ ಇನ್ನು ನೌಕರಿಗೆ ಹೋಗಬೇಕೆಂಬ ಆಶೆಯು ಉಳಿದಿದ್ದಿಲ್ಲ. ಏನೋ ನಾಲ್ಕು ಜನರ ಮನಸ್ಸು ನೋಯಿಸಬಾರದೆಂದು ಮಾತಿನಗೂಡ ಮಾತಾಡುತ್ತಿದ್ದನಿಷ್ಟೇ.

ತನ್ನ ಹೊಲಮನೆಗಳನ್ನು ನೆಟ್ಟಗೆ ಮಾಡಿಸಿಕೊಳ್ಳುವದೂ, ಪತ್ತು ಕಾಯ್ದು ಕೊಂಡು ಬಡವರ ವಿಪತ್ತು ದೂರಮಾಡುವದೂ, ತುಂಟರಿಗೂ ತಿಳಿಹೇಳಿ ಹಾದಿಗೆ ತರುವದೂ ಇವೇ ಅವನ ದಿನದ ಹೋರಿಗೆಗಳಾಗಿದ್ದವು. ಮುಂಜಾನೆ ಸ್ನಾನ ಮಾಡಿ, ಒಂದು ಶಾಲಿಗ್ರಾಮದ ಪೂಜೆಮಾಡಿ, ಹುಡುಗರೊಡನೆ ಹಾಲುಕುಡಿದು ಹೊರಬೀಳುತ್ತಿದ್ದನು. ಮಧ್ಯಾಹ್ನಕ್ಕೆ ಅತಿಥಿಗಳು ಬಂದರೆ ಅವರ ಪದ್ಧತಿಯಂತೆ ಅವರಿಗೆ ಅನುಕೂಲಮಾಡಿ ಆತಿಥ್ಯವನ್ನು ನೆರವೇರಿಸುತ್ತಿದ್ದನು. ಇಂಗ್ರಜಿ ಕಲಿತ ಮೂಲಕ ಸಂಸ್ಕೃತವೂ ತಕ್ಕಮಟ್ಟಿಗೆ ತಿಳಿಯುತ್ತಿದ್ದದರಿಂದ ಮಾನ್ಯವಾದ ಸಂಸ್ಕೃತಗ್ರಂಥಗಳನ್ನು ನೋಡುತ್ತ ವಿಶ್ರಾಂತಿಯ ವೇಳೆಗಳೆಯುತ್ತಿದ್ದನು. ಆತನ ದೈವದಿಂದ ಹೆಂಡತಿಯು ಕನ್ನಡ ಓದಬರಹ ಬಲ್ಲಾಕೆಯೂ ಒಳ್ಳೆಯವಳೂ ರೂಪ ವತಿಯೂ ಸಿಕ್ಕಿದ್ದಳು. ಮನೆಯಲ್ಲಿ ತಾಯಿ ಸೋದರತ್ತೆ ಮೊದಲಾದ ಮೊದಲ್ಕು

ತ್ರಯಿಟ್ಟಿಯರಿದ್ದರೂ, ಅವರೂ ಅಧಿಕಪ್ರಸಂಗಿಗಳಾಗದೆ ' ಹುಡುಗ ಬುದ್ಧಿವಂತ ಇದ್ದಾನೆ ತೀರಿತು; ನಮಗೇಕೆ ಒಣ ಉಸಾಬರಿ; ಅವ ಹೇಳಿದಂತೆ ಕೇಳಿದರೆ ತೀರಿತು. ಅನ್ನುವವರಾಗಿದ್ದರು. ಕೆಲವೇಳೆ ಗಂಡಹೆಂಡರಿಬ್ಬರೂ ಸ್ನೇಹಿತರಂತೆ ಓದುತ್ತ ಮಾತಾಡುತ್ತ ಕೂಡ್ರುತ್ತಿದ್ದರು. ಆಗ ಮನೆಯ ಹಿರಿಯ ಹೆಣ್ಣುಮಕ್ಕಳೂ ನೆರೆಹೊರೆಯ ಪ್ರೌಢರೂ ಆ ದಂಪತಿಗಳ ಮಾತು ಕೇಳುತ್ತ ಹೇಳುತ್ತ ವೇಳೆಗಳೆ ಯುತ್ತಿದ್ದರು. ರಾಮರಾಯನಾದರೂ ದೇಶವಿದೇಶದ ಉದಾರಜನರ ನಡೆವಳಿಕೆ ಯನ್ನೂ ಸೃಷ್ಟಿಚಮತ್ಕಾರಗಳನ್ನೂ ಹೇಳುತ್ತಿದ್ದನು.

( ೨ )

ಧನುರ್ಮಾಸದ ಮಧ್ಯಾಹ್ನ. ಎಲ್ಲರೂ ಊಟಮಾಡಿ ಹರಟೆಹೊಡೆಯುತ್ತ ಕುಳಿತಿದ್ದರು. ಆಗ ಒಬ್ಬ ಆಚಾರ್ಯರು ಶಿಷ್ಯನೊಂದಿಗೆ ರಾಮರಾಯನ ಮನೆಗೆ ಬಂದಿಳಿದರು. ರಾಮರಾಯನು ಎದ್ದು—"ಬರ್ರಿ ಸ್ವಾಮೀ, ಬರಬೇಕು ಇತ್ತ ಕೂತು ಕೊಳ್ಳಬೇಕು." ಎಂದು ಗಾದಿತಕ್ಕೆ ತೋರಿಸಿದನು. ಆಚಾರ್ಯರು ವಿಶ್ರಮಿಸಿ ಕೊಂಡರು. ಶಿಷ್ಯನು ಕುದುರೆಯ ಕಟ್ಟಿ ಸಾಮಾನುತೆಗೆದಿಟ್ಟು ಮೇವು ಚಲ್ಲಿ ದೂರ ದಲ್ಲಿ ಬಂದು ಕೂತನು.

ಆಚಾರ್ಯರು ಭೋಜನ ತೀರಿಸಿಕೊಂಡೇ ಬಂದಿದ್ದರೆಂಬದನ್ನು ಅಕ್ಷತಿಯಂಗಾ ರಗಳಿಂದೇ ತಿಳಿದುಕೊಂಡು ರಾಮರಾಯನು:—ಕೈಕಾಲು ತೊಳೆದುಕೊಳ್ಳಬೇಕು, ಉಪಹಾರವೇನಾದರೂ ಆಗಲಿ; ಫಲಾಹಾರಕ್ಕೆ ಮಡೀಪಂಜೆ ಬೇಕೇನು ? ಎಂದು ಕೇಳಲು ಆಚಾರ್ಯರು ಅಷ್ಟೇನು ಶಿಷ್ಟತನವಿಲ್ಲ. ನಿಮ್ಮಂತೆ ನಾವು. ಎಂದರು:— ಕೂಡಲೆ ರಾಮರಾಯನು ಆಳಿಗೆ ಮನೆಯೊಳಗಿನ ಕಬ್ಬಿನಲ್ಲಿ ಚಲೋವು ಆರಿಸಿ ತುದಿಯ ಕಡಿದು ಕೈಗಾಣದಲ್ಲಿ ಒಂದು ಬಿಂದಿಗಿ ಹಾಲು ತೆಗೆದುಕೊಂಡು ಬಾ ರೆಂದು ಹೇಳಿದನು. ಆಳು ' ಬುದ್ದೀ ' ಎಂದು ಮತ್ತಿಬ್ಬರನ್ನು ಕರೆದುಕೊಂಡು ಹೋದನು. ತಾಯಿಗೆ ಸನ್ನೆ ಗೊತ್ತೇಯಿತ್ತು. ಅದೇ ಚಹಾಕ್ಕೆ ಅಂತಾ ಮಾಡಿಟ್ಟ ಹಳೆ ಅವರೆಯಕಾಯಿಯ ಬಿಸಿಯುಸಳಿಯ ಮೇಲೆ ಮತ್ತೆರಡು ಬಟ್ಟಲ ಕೊಬ್ಬರೀ ಹೆರೆದುಹಾಕಿ ಮಣಿ, ಎಲೆ, ಅವಲಕ್ಕಿ ಸಿದ್ಧಮಾಡಿದಳು. ಆಳು ನೊರಕಬ್ಬಿನಹಾಲಿನ ಬಿಂದಿಗಿಯನ್ನು ತಂದಿಡಲು ಹೆಂಡತಿಯು ಕಲೆಯದ ತಪ್ಪೇಲಿಯಲ್ಲಿ ಸೋಸಿ ಬೆಳ್ಳಿ ತಂಬಿಗೆಗೆ ಹಾಕಿ ೩—೪ ವಾಟಕಗಳನ್ನು ಎಲೆಯ ಸಮೀಪಕ್ಕೆ ಇಟ್ಟಳು. ರಾಮ ರಾಯನು ನಿತ್ಯದ ಚಹಾದ ಮಂಡಳಿಯನ್ನು ಕುರಿತು—" ಶಿಷ್ಟಗಮನೇ ಅನ ಧ್ಯಾಯಃ" ಇಂದು ನಮ್ಮ ವಾಡಿಕೆಯ ಅಭ್ಯಾಸವನ್ನು ನಿಲ್ಲಿಸಿರುತ್ತದೆ. ಪಂಕ್ತಿ ಭೇದಬೇಡ; ಕಬ್ಬಿನಹಾಲಿಗೇ ಬರ್ರಿ; ಎಂದು ಕರೆದನು. ಎಲ್ಲರೂ ಫರಾಳಮಾಡಿ

ಹಾಲುಕುಡಿದು ಎಲೆಯಡಕೆ ಹಾಕಿಕೊಳ್ಳಲಿಕ್ಕೆ ಪಡಸಾಲಿಗೆ ಬಂದು ಕುಳಿತರು. ಅಷ್ಟರೊಳಗೆ ರಾಮರಾಯರ ಕುಟುಂಬವು ಅಲ್ಲಿ ಮೈಸೂರ ಕಡ್ಡಿಗಳನ್ನು ಹಚ್ಚಿ ಅತ್ತರದಾನಿಯನ್ನು ಹತ್ತರವೇ ಇರಿಸಿ ಹೋಗಿತ್ತು. ಸಂತೋಷದಿಂದ ಮಾತುಕಥೆಗಳು ನಡೆದವು.

**ರಾಮರಾಯ:**—ತಾವು ನಾನು ಸಣ್ಣವನಿದ್ದಾಗ ಇಲ್ಲಿಗೆ ಬರೋಣಾಗಿತ್ತೆಂದು ಅಪ್ಪನು ಹೇಳಿದಳು. ಆಚೆಯ ವರುಷ ಬೆಳಗಾಂವಿಯ ಮಾರುತಿಗುಡಿಯಲ್ಲಿ ತಮ್ಮ ವ್ಯಾಖ್ಯಾನವಾಗುವಾಗ ನಾನು ತಮ್ಮನ್ನು ಕಂಡಿದ್ದೆ. ಬಡವನ ಮನೆಗೆ ಬಂದದ್ದು ವಿಹಿತವಾಯಿತು.

**ಆಚಾರ್ಯ:**—ಎಂಥ ಬಡವ, ಸುಖಬಡುವ ನೀನು. ನಿನ್ನ ಹೆಸರು ಕೇಳಿದ್ದೆನು. ಅಕಸ್ಮಾತ್ ನಾನು ಹೋಗುವ ದಾರಿಯಲ್ಲಿ ನಿಮ್ಮೂರು ಬಂದದರಿಂದ ನಿನ್ನನ್ನು ಕಂಡೇ ಹೋಗಬೇಕೆಂದು ಮನೆಗೆ ಬಂದೆನು.

ಎಲ್ಲರೂ ಸಂತೋಷದಿಂದ ಏನಾದರೂ ವಿಷಯವನ್ನು ತೆಗೆಯಬೇಕೆಂದು ತಮ್ಮತಮ್ಮೊಳಗೇ ಗುಣುಗುಣು ನಡಿಸಿದರು.

**ಒಬ್ಬನು**:—ಸ್ವಾಮೀ, ದಿವಸ ಕಠಿಣ ಬಂದವು. ಬ್ರಾಹ್ಮಣರಿಗೆ ನೌಕರಿ ದುರ್ಲಭವಾಯಿತು. ಏನು ಮಾಡತಕ್ಕದ್ದು ?

**ಮತ್ತೊಬ್ಬನು:**—ನಾನು ಅವನ್ನೇ ಕೇಳಬೇಕೆಂದಿದ್ದೆನು. ಸರಿ. ಇನ್ನೂ ಆ ಹುಚ್ಚು ನಮ್ಮ ತರುಣರನ್ನು ಬಿಟ್ಟಿಲ್ಲ; ಇನ್ನು ಆ ಮಾರ್ಗವನ್ನೇ ಬಿಡುವದು ಲೇಸಪ್ಪಾ.

**ಇನ್ನೊಬ್ಬನು:** – ಬಿಟ್ಟು ಏನು ಮಾಡಬೇಕು ?

**ಆಚಾರ್ಯ:**— ಶ್ರೀ ಹರ್ಷರಾಜನಕಾಲಕ್ಕೂ ಹೀಗೇ ಪ್ರಸಂಗ ಬಂದಿತ್ತೋ ಏನೋ ! ನೈಷಧದಲ್ಲಿ ಒಂದು ಪದ್ಯವಿದೆ.

**घनांबुना राज पथेहि पिच्छिले क्वचिद्बुधैरप्यपथेन गम्यते ॥**

ರಾಜಮಾರ್ಗವೂ ಮಳೆನೀರಿನಿಂದ ರಾಡಿಯಾಗಲು ವಿದ್ವಾಂಸರು ಕೂಡ ಅಡ್ಡದಾರಿ ಹಿಡಿದು ಪಾರಾಗುವದುಂಟು. ಇದರಂತೆ ನೀವೂ ತಿಳಿದುಕೊಳ್ಳುವ ರಾಜಮಾರ್ಗವಾದ ಚಾಕರಿಯು ಸಿಗದಿರಲು ಬೇರೆ ಉದ್ಯೋಗವನ್ನು ಹುಡುಕಲೇ ಬೇಕು. ತಕ್ಕ ಜಾಗರೂಕತೆಯನ್ನೂ ಸಾಹಸವನ್ನೂ ಮಾಡಲೇ ಬೇಕು.

**साहसे श्रीः प्रतिष्ठिता ।**

**ಬೇರೊಬ್ಬ:** — ( ತನ್ನಹತ್ತರಿದ್ದವನಿಗೆ ) ಅದಿರಲಿ ಬಿಡೋ, ದೇವರ ವಿಷಯಕ್ಕೆ ಕೇಳೋಣ. ನಮಗೆ ಭೌತಿಕ ಶೋಧಗಳನ್ನೇ ಓದಿ ದೇವರ ವಿಷಯಕ್ಕೆ ಅಪನಂಬಿಗೆಯಾಗಿದೆ. ದೇವರಿದ್ದಾನೆಂದು ಹೇಗೆ ನಂಬಬೇಕು ?

**ಆಚಾರ್ಯರ**:—ಇಂಥ ಸಂಶಯವನ್ನೇ ಮೊದಲು ತಂದುಕೊಳ್ಳಬಾರದು. ಆಗಲಿ, ವೇದವ್ಯಾಸರಂಥವರು ಪರಮಾಪ್ತರು. ನಿಷ್ಕಾರಣವಾಗಿ ಜನರನ್ನು ಮೋಸಗೊಳಿಸುವವರಲ್ಲ. ಯಥಾರ್ಥವಾದಿಗಳು. ನಿಸ್ಪೃಹರು. ಅವರಂತೆಯೇ ಶ್ರೀ ಶಂಕರಾಚಾರ್ಯರ, ಪುರಂದರದಾಸ, ತುಕಾರಾಮ ಮೊದಲಾದ ಎಲ್ಲ ದೇವಭಕ್ತರು ದೇವರ ಅಸ್ತಿತ್ವವನ್ನು ಒಪ್ಪಿಕೊಂಡೇ ನಡೆಯಿರಿ; ಎಂದು ಹೇಳಿದ್ದಾರೆ. ಕೆಲವರಿಗೆ ಸಾಕ್ಷಾತ್ಕಾರಗಳು ಆಗುತ್ತವಂತೆ. ಅದರಿಂದ ಕೇವಲ ಭಕ್ತಿಯಿಂದ ದೇವರನ್ನು ನಂಬಲೇ ಬೇಕು.

**ಮಗದೊಬ್ಬ**:— ಅದಾಯಿತು ಸ್ವಾಮೀ, ನಮ್ಮಂಥವರಿಗೆ ಹೇಗೆ ತಿಳಿಯಬೇಕು ?

**ಆಚಾರ್ಯರ**:—ನಿಮ್ಮಂಥವರು ಬಲ್ಲವರ ಮಾತನ್ನು ನಂಬಿಯೇ ನಡೆಯಬೇಕು. ನಿಮ್ಮ ಜ್ಞಾನುತ್ತೇಂದಿರು ನಡೆದ ದಾರಿಯ ಹಿಡಿಯಬೇಕು. ಎಲ್ಲರಿಗೂ ಅಪರೋಕ್ಷಜ್ಞಾನವು ಸಾಧ್ಯವಲ್ಲ. ನೀವೇ ಹೇಳತೀರಿ. ಬೋಸನು ಬಳ್ಳಿಗಳಿಗೆ ಜೀವವಿರುವದನ್ನು ಶೋಧಮಾಡಿದನು. ಮಾರ್ಕೋನಿಯು ತಂತಿಯಿಲ್ಲದ ಸುದ್ದೀ ಮುಟ್ಟಿಸುವ ಯಂತ್ರವನ್ನು ಕಂಡುಹಿಡಿದನು. ಇವೆಲ್ಲ ಮಾತುಗಳು ಸಿಕ್ಕವರಿಗೆ ಮನವರಿಕೆಯಾಗುವಂಥವೇ ? ಅದಕ್ಕೆ ಅಧಿಕಾರವೇ ಬೇಕು. ಇದನ್ನೂ ಬಿಡಿರಿ, ನೀವು ಒಂದು ಕ್ಷುದ್ರವಾದ ಹಳ್ಳಿಗೆ ಹೋಗಿ ಒಂದು ಸೂಜಿಗಲ್ಲನ್ನೂ ಸೂಜಿಯನ್ನೂ ತೋರಿಸಿರಿ. ಅಲ್ಲಿಯ ಕುರುಬರು—'ಅಪನವರು ಏನೋ ಮಂತ್ರಮಾಡೀದಾರಪ್ಪಾ, ಕಬ್ಬಿಣಕ್ಕ ಹಿಡತಾ ಹ್ಯಾಂಗ ಬಂತೊ!' ಎಂದು ಗಾಬರಿಯಿಂದ ಬೆರಗಾಗಿ ಕೇಳುತ್ತಾರೆ. ನಿಮಗೆ ಅದು ಅದರ ಸ್ವಭಾವವೆಂದು ಗೊತ್ತಿದೆ. ಇದರಿಂದ ನಿಮಗೂ ಹಳ್ಳಿಗಾಡಿನವರಿಗೂ ಅಂತರವೆಷ್ಟೋ, ಅಷ್ಟೇ ಅದೇಕೆ ಇನ್ನೂ ಹೆಚ್ಚು—ನಮಗೂ ವ್ಯಾಸಾದಿ ಋಷಿಗಳಿಗೂ ಅಂತರವಿದೆ. ನಂಬಿ ನಡಕೊಂಡವರಿಗೆ ಇಂದಿಗೂ ಫಲಪ್ರಾಪ್ತಿಯಾಗುವದೇ ಆತನ ಅಸ್ತಿತ್ವಕ್ಕೆ ಸಾಕ್ಷಿ. ಪೃಥ್ವಿಯ ಎಲ್ಲ ದೇಶಗಳೊಳಗೂ ದೇವರ ವಾಚಕಶಬ್ದಗಳು ಇವೆ. ಇವೆಲ್ಲವುಗಳನ್ನು ಸೂಕ್ಷ್ಮವಾಗಿ ಮನನಮಾಡಿ ಭಕ್ತಿಯಿಂದ ಭಜಿಸದೆ ನಿಮ್ಮ ಪ್ರಶ್ನಕ್ಕೆ ಉತ್ತರವು ಸಿಗದು. ಶ್ರೀರಾಮಕೃಷ್ಣ ಪರಮಹಂಸ, ಅರವಿಂದ ಮೊದಲಾದವರ ನೆನಪು ನಾವು ಮಾಡಿಕೊಡಬೇಕಾಗಿಲ್ಲ. ನಿಮ್ಮ ನಿಮ್ಮ ಇಷ್ಟದೇವತೆಯ ಸಹಸ್ರನಾಮವನ್ನೂ ಭಗವದ್ಗೀತೆಯನ್ನೂ ಓದುತ್ತಿರಿ. ಅದೇ ಸಂಶಯನಿವೃತ್ತಿಗೆ ಮಾರ್ಗವು.

**ರಾಮರಾಯ**— ತಮಗೆ ಸುಳ್ಳೇ ಶ್ರಮಕೊಡಬೇಕಂತಲ್ಲ. ಬಹು ಶ್ರೋತರು ಬಂದಿರುವಿರಿ; ಕೇಳಿಕೊಳ್ಳಬೇಕೆಂಬದೆ ಕುತೂಹಲ. ಕನ್ನಡ ಭಾಷೆಯ ವಿಷಯಕ್ಕೆ ತಮಗೇನೆನಿಸುತ್ತದೆ ?

**ಆಚಾರ್ಯ**— ನಿಮ್ಮಷ್ಟು ಓದುವದಿಲ್ಲ. ಕೇಳುವದಿಲ್ಲ. ಆದರೂ ತಿಳಿದಷ್ಟು ಹೇಳದಿರುವದು ಆತ್ಮಚೌರ್ಯವು. ಕನ್ನಡವು ಬಹು ಪುರಾತನದ್ದು. ಸ್ವತಂತ್ರಭಾಷೆ. ನಾವು ಬಹುಕಾಲ ಎರಡನೆಯುವರನ್ನು ನಂಬಿ ಪರಾಧೀನರಾದಂತೆ, ಕನ್ನಡವೂ ಸಂಸ್ಕೃತವನ್ನು ನಂಬಿ ಸ್ವಲ್ಪ ಪರಾವಲಂಬಿಯಂತೆ ಕಾಣುತ್ತದೆ. ಇಷ್ಟೇ. ಅದು ಗೌರವವುಳ್ಳ ಭಾಷೆಯೇ. ಸಂಸ್ಕೃತದವರು ಎಷ್ಟೋ ಕನ್ನಡ ಶಬ್ದಗಳನ್ನು ಶುದ್ಧಿ ಮಾಡಿ ತಮ್ಮ ಭಾಷೆಗೆ ಸಂಘಟನ ಮಾಡಿರುವದಾಗಿ ಆಧುನಿಕ ಪಂಡಿತರೂ ಒಪ್ಪುತ್ತಾರೆ. ಕನ್ನಡವನ್ನು ಬಳಿಸುತ್ತ ಬಳಿಸುತ್ತ ಬೆಳಿಸಬೇಕು

ನಾನೊಂದು ಐತಿಹಾಸಿಕ ಸಂಗತಿಯನ್ನು ಹೇಳುತ್ತೇನೆ. ಅದು ವಿನೋದವೆನ್ನಿರಿ; ಇಲ್ಲವೆ ಪಾರಮಾರ್ಥವೆನ್ನಿರಿ.

(೩)

ಅತಿ ಪ್ರಾಚೀನ ಕಾಲದಲ್ಲಿ ತಿಳಿದವರು ಬಹು ಜನ ಬ್ರಾಹ್ಮಣರೇ ಇದ್ದರು. ಅವರ ಸಾತ್ವಿಕತನದಿಂದ ಸಂರಕ್ಷಣೆಯಾಗದಿರಲು, ಮುಂದೆ ಕ್ಷತ್ರಿಯರೆಂಬ ಶೂರರನ್ನು ಕೂಡಿದರು. ಇಬ್ಬರಿಗೂ ಸಂಸಾರಯಾತ್ರೆ ಸುಗಮವಾಗದ್ದರಿಂದ ವೈಶ್ಯರನ್ನು ತಮ್ಮೊಳಗೆ ಕೂಡಿಸಿಕೊಂಡು ಸಂಘಟನೆಮಾಡಿ ದ್ವಿಜರೆಂದು ಹೆಸರಿಟ್ಟುಕೊಂಡರು. ಇವರಿಗೂ ದ್ರವಿಡರಿಗೂ-ಅವರೊಳಗೂ ಸಾತ್ವಿಕಾದಿ ಸ್ವಭಾವದವರಿದ್ದರು—ಭೆಟ್ಟಿಯಾಯಿತು. ದ್ರವಿಡರಲ್ಲಿ ಕಡುಗಲಿಯಾದ **ಕಲಿ** ಎಂಬ ಅರಸನಿದ್ದನು. ಅವನಿಗೂ ಆರ್ಯದ್ವಿಜರಿಗೂ ಮೇಲಿಂದ ಮೇಲೆ ಯುದ್ಧಗಳಾಗಿ ಬೇಸತ್ತರು. ಒಪ್ಪಂದಕ್ಕೆ ಮಧ್ಯಸ್ಥರಾಗಲು ಯಾರು ಯೋಗ್ಯರು? ಎಂಬ ಪ್ರಶ್ನೆ ಬಂದಿತು. ಎರಡೂ ಪಕ್ಷದವರಿಗೆ ವ್ಯಾಸಮಹರ್ಷಿಗಳು ತಕ್ಕವರೆಂದು ಒಪ್ಪಿಗೆಯಾಯಿತು. ಭಾಗೀರಥೀತೀರಕ್ಕೆ ಹೋಗಿ ವ್ಯಾಸರಿಗೆ ನಮಸ್ಕರಿಸಿ ಉಭಯಪಕ್ಷದವರೂ ತಮ್ಮ ತಮ್ಮ ದೂರು ಹೇಳಿ ಕೂಡಿಸುವ ಉಪಾಯವನ್ನು ಕೇಳಿಕೊಂಡರು. ಮಹರ್ಷಿಗಳು ಕ್ಷಣಹೊತ್ತು ಸಮಾಧಿಯಿಂದ ಯೋಚಿಸಿ,—ದ್ರವಿಡ—ಕನ್ನಡಿಗರೂ ನೀವೂ ಕೂಡಿರುವದೇ ಭರತಖಂಡಕ್ಕೆ ಶ್ರೇಯಸ್ಕರವು. ಇವರಿಗೆ ಶೂದ್ರರೆಂದು ಹೆಸರಿಟ್ಟು ನಿಮ್ಮೊಳಗೆ ಕೂಡಿಸಿಕೊಳ್ಳಿರಿ. ಇವರು ಸೇವೆಯನ್ನು ಮಾಡಲಿ. ಶ್ರಮವಿಭಾಗದಂತೆ ಪರಸ್ಪರ ಹಿತವನ್ನು ಬಯಸಿಕೊಂಡು ಕ್ಷೇಮದಿಂದಿರ್ರಿ, ಎಂದುತ್ತರಕೊಟ್ಟರು.

**ಕನ್ನಡಿಗರು**—ನಾವು ಸೇವೆಯನ್ನೇಕೆ ಮಾಡಬೇಕು!

**ವ್ಯಾಸ**—ಅಪ್ಪಾ, ಸೇವೆಯೆಂದರೆ ಮನೆಗೆಲಸವೆಂದು ತುಚ್ಛವಲ್ಲ. ದನಗಾಹಿಯಿಂದ ರಾಜಮಂತ್ರಿಯ ವರೆಗೂ ಮಾಡುವ ಕಾರ್ಯವು ಸೇವೆಯೇ. ನಿಮ್ಮಿಂ

ದಾಗುವ ಕೆಲಸವನ್ನು ನಿಸ್ಪೃಹವಾಗಿ ನಾನು ಹೇಳಿದೆ. ಅಥವಾ ನನ್ನ ಬಾಯಿಂದ ಬಂದಿತು. ಅದೇ ನಿಜವು. ಅದೇ ತ್ರಿಕಾಲಾಬಾಧಿತವು.

**ಕನ್ನಡಿಗರು**—ಹಾಗಾದರೆ ನಾವು ಒಪ್ಪುತ್ತೇವೆ. ನಮ್ಮ ಒಪ್ಪಂದಸೂಚಕವಾದ ಕನ್ನಡದ ಕುರುಹು ನಿಮ್ಮ ಗ್ರಂಥದೊಳಗೂ ಆಚಂದ್ರಾರ್ಕ ಉಳಿಯುವಂತೆ ಏರ್ಪಾಡಾಗಬೇಕು.

**ವ್ಯಾಸ**—ತಥಾಸ್ತು. ನಾವು ಕಾಲವಲ್ಲಿ ನಾಲ್ಕು ವಿಭಾಗ ಮಾಡುತ್ತೇವೆ. ಒಂದೊಂದಕ್ಕೆ ಒಂದು ಪಂಗಡದ ಹೆಸರಿಡುತ್ತೇವೆ. ಅದೇ ಕಡೆಗೂ ಉಳಿಯುವದು. ಅದರ ಕೂಡ ಕನ್ನಡದ ಸ್ಮಾರಕವೂ ಆಗುವದು.

ಅದು ಹೇಗೆಂದರೆ-ಕೃತ-ಬ್ರಾಹ್ಮಣ, ತ್ರೇತಾ-ಕ್ಷತ್ರಿಯ, ದ್ವಾಪರ-ವೈಶ್ಯ, ಕಲಿ-ಶೂದ್ರ ಮತ್ತು ಕೊನೆಯದಾದ **ಕಲಿ** ಎಂಬ ಹೆಸರು ನಿಮ್ಮರಾಜನಾದ ಕಡುಗಲಿಯಾದ ಕಲಿಯದು. ಮುಂದೆ ಶಕರೆಂಬವರ ಹೆಸರಿನಿಂದ ಕಾಲಗಣನೆಯಾಗುವದು. ನಾಲ್ಕೈದು ಸಾವಿರ ವರುಷಕ್ಕೆ ಜಾತಿಸಂಕರವಾಗುತ್ತದೆ. ಅದು ದೇವರ ಇಚ್ಛೆ. ಆಗ ಕಲಿತನದಿಂದೇ ಸೌಖ್ಯ; ಹೇಡಿತನದಿಂದಲ್ಲ. ಯಾರೊಬ್ಬರು ನೀನು 'ಕಲಿ, ನೀನು ಕಲಿ, ಎಲ್ಲರೂ ಕಲಿಯಿರಿ.' ಎಂದು ಹೇಳುವವರಾಗುತ್ತಾರೆ. ಕಲಿತವರಿಗೂ ದಾಸ್ಯವು-ರಾಜಸೇವೆ-ಸಿಗದಂತಾಗುತ್ತದೆ. ಆಗ ನಿಮ್ಮ ನಿಮ್ಮೊಳಗೆ ಕಲಿ-ವ್ಯಾಜ್ಯ ಹುಟ್ಟುತ್ತದೆ. ಅಂತೂ ಕನ್ನಡದ **ಕಲಿ** ಎಂಬ ಮಾತೇ ಸರ್ವವ್ಯಾಪಿಯಾಗುತ್ತದೆ. ಅದೇ ನಿಮ್ಮ ಆರ್ಯರ ಒಪ್ಪಂದದ ಸ್ಮಾರಕವಾಗುತ್ತದೆ. ಎಂದು ಅಪ್ಪಣೆ ಕೊಡಿಸಿದರು. **ರಾಮರಾಯ**:-ಇದನ್ನು ಹೊಸದಾಗಿ ಕೇಳಿದೆವು. ಅಥವಾ ತಾವು ಪ್ರತಿಭಾಶಾಲಿಗಳು. ಇದೊಂದು ಕಲ್ಪಿತಮಾತನ್ನೇ ಹೇಳಿದಿರೋ ತಿಳಿಯದು !

ಎಲ್ಲರೂ ಅರ್ಧ ಸಮ್ಮತಿಯಿಂದ ನಕ್ಕರು.

**ಆಚಾರ್ಯ**—ನನ್ನ ಬಾಯಿಂದ ಆಡಿಸುವವನು ದೇವರೇ ಸರಿ. ವ್ಯಾಸರ ಸರ್ವಸೂತ್ರದಲ್ಲಿ ಹೀಗೆ ಇದೆ.

"विचारोच्चाराचारस्वातंत्र्यः कलिः ॥"

ಮತ್ತೆ ಆ ಈ ಕ್ಷೇಮಸಮಾಚಾರವಾಗಿ ಸಂತೋಷದಿಂದ ವೇಳೆ ಹೋಯಿತು. ಅಂದು ಅಲ್ಲೇ ವಸತಿಯಾಗಿ ಆಚಾರ್ಯರಿಗೆ ರಾತ್ರಿ ಸುಗ್ರಾಸ ಮೇಜವಾನಿಯಾಯಿತು. ಬಳಿಕ ಗಾಯನವಾದನಗಳು ನಡೆದವು.

ಮರುದಿವಸ ಮುಂಜಾನೆ ಮಾರುತಿಯ ದೇವಾಲಯದಲ್ಲಿ ಚಿಕ್ಕ ಸಭೆಗೂಡಿ ಆಚಾರ್ಯರಿಗೆ ಬಹುಮಾನವೆಂದು ರಾಮರಾಯನ ಹಸ್ತದಿಂದ ಒಂದು ಶಾಲು. ರಾಮನಾಮದ ಉಂಗುರವೂ ಕನ್ನಡ ಗೀತಾರಹಸ್ಯವೂ ಸಮರ್ಪಿ[illegible] ಎಲ್ಲರೂ ನಮಸ್ಕಾರ ಮಾಡಿದರು. ಆಚಾರ್ಯರು-'ಕರ್ತವ್ಯರ[illegible] ಯಣರಾಗಿರಿ ' ಎಂದು ಆಶೀರ್ವದಿಸಿ ಅಪ್ಪಣೆಯ ತಕ್ಕೊಂಡರು.

---